# ಅಭಿಪ್ರಾಯ

ಶ್ರೀಮಾನ್ ಜಿ. ಎಂ. ಪಾಟೀಲ ಅವರು ಬರೆದ 'ಭಾರತವೀರ' ಮತ್ತು 'ಶಿವನ ಸೋಲು' ಇವನ್ನು ಆಮೂಲಾಗ್ರವಾಗಿ ಓದಿದೆನು. ಇವೆರಡೂ ಏಕಾಂಕ ನಾಟಕಗಳನ್ನು ಸರಳ ರಗಳೆಯಲ್ಲಿಮೂಡಿಸುವ ಪ್ರಯತ್ನವನ್ನು ಶ್ರೀ ಪಾಟೀಲ ಅವರು ಮಾಡಿದ್ದಾರೆ. 'ವ್ಯಾಸನ 'ಮಹಾಭಾರತ' ಕುಮಾರ ವ್ಯಾಸನ 'ಕೃಷ್ಣಕರ್ಣಸಂವಾದ' ಪಂಪನ 'ಕರ್ಣಾವಸಾನ' ಇವುಗಳಲ್ಲಿ ಒಡಮೂಡಿದ ಕರ್ಣನ ಚಿತ್ರವನ್ನು ಕಂಡು, ಪರಿಣಾಮಗೊಂಡು ವಾಚಕರಿಗಾಗಿ ಅವನ್ನು 'ಭಾರತವೀರ' ದಲ್ಲಿ ಪಡೆಮೂಡಿಸಿರುವರು.

'ಶಿವನ ಸೋಲು' ಆಂಡಯ್ಯ ಮಹಾಕವಿಯ 'ಕಬ್ಬಿಗರಕಾವ' ವನ್ನು ಓದಿ ಸ್ಫೂರ್ತಿಗೊಂಡು ಬರೆದುದು. ಹಿಂದಣ ಕವಿಕೃತಿಗಳನ್ನು ಓದಿ ಅರಗಿಸಿಕೊಂಡು ತಮ್ಮ ಮಾತಿನಲ್ಲಿ ಆಯಾ ಕಥಾನಾಯಕರ ಚಿತ್ರವನ್ನು ರೂಪಿಸಿರುವ ಶ್ರೀಮಾನ್ ಪಾಟೀಲರ ಸಾಹಸವು ಪ್ರಶಂಸ ನೀಯವಾಗಿದೆ. ರಗಳೆಯ ಶೈಲಿಯಲ್ಲಿ ಮೈವೆತ್ತ ಅವರ ಈ ಕಿರಿಯ ಕೃತಿಗಳು ಅವರ ಪ್ರಥಮ ಪ್ರಯತ್ನವನ್ನು ವ್ಯಕ್ತಗೊಳಿಸುವವು. ಹಿರಿಯ ಸಾಹಿತ್ಯಕರು ಅವನ್ನು ನೋಡಿ ಹಿಗ್ಗಬಹುದಾಗಿದೆ.

ಇನ್ನು ಮುಂದೆ ಬೆಳಕನ್ನು ಕಾಣಲಿರುವ ಅವರ ಕೃತಿಗಳಲ್ಲಿ ಭಾಷೆ ಭಾವಗಳ ಮೇಳವು ಹೆಚ್ಚು ಹೆಚ್ಚು ಪುಟಗೊಂಡು ಸಾಹಿತ್ಯ ಸೇವೆಯು ಅವರಿಂದ ಇನ್ನೂ ಹೆಚ್ಚಾಗಿ ನೆರವೇರಲೆಂದು ಹಾರೈಸಿ, ಓದುಗರು ಇವೆರಡು ಕೃತಿಗಳನ್ನು ಆದರದಿಂದ ಬರಮಾಡಿಕೊಳ್ಳುವ ರೆಂದು ನಂಬಲಾಗಿದೆ.

**ಕೊಪ್ಪಳ ವೀರಭದ್ರಪ್ಪ**
ಪ್ರಿನ್ಸಿಪಾಲ ಆರ್. ಎಲ್. ಎಸ್
ಹಾಯಸ್ಕೂಲ
ಧಾರವಾಡ

ನವಕಲ್ಯಾಣಪುರ
ಭೂಸಪೇಟಿ ಧಾರವಾಡ
ದಿನಾಂಕ: — ೭—೬—೪೮

# ಭಾರತ ವೀರ

ಮತ್ತು

# ಸಿವನ ಸೋಲು



ಲೇಖಕರು:

ಜಿ. ಎಂ. ಪಾಟೀಲ

೧೯೪೮ ಬೆಲೆ ೧. ೦—೦

# ಮುನ್ನುಡಿ



ಈ ಪುಟ್ಟ ಹೊತ್ತಿಗೆಯಲ್ಲಿ ಅಡಕವಾಗಿರುವ "ಭಾರತ ವೀರ" ಮತ್ತು "ಶಿವನ ಸೋಲು" ಎಂಬೆರಡು ಕೃತಿಗಳನ್ನು ರಚಿಸಿದ ಶ್ರೀ. ಜಿ. ಎಂ. ಪಾಟೀಲರು ಇನ್ನೂ ಚಿಕ್ಕವರು; ಆದರೂ ಸಾಹಿತ್ಯಾಭ್ಯಾಸಿಗಳೂ ಲೇಖನ ಕಲೆಯಲ್ಲಿ ನುರಿತವರೂ ಎಂಬುದು ಸ್ಪಷ್ಟವಿದೆ. ಹೆಸರಿನಿಂದ ಸುಲಭವೆಂದು ಕಂಡರೂ ಸಾಮಾನ್ಯರಿಗೆ ಸಹಜವಾಗಿ ಅಳವಡದ ಸರಳ ರಗಳೆಯಲ್ಲಿ ಕೃತಿಗಳನ್ನು ರಚಿಸಲೆಳಸುವುದೇ ಧಾರ್ಷ್ಟ್ಯವೆಂದು ಕೆಲವರು ಹೇಳಬಹುದಾದರೂ ಪ್ರಸ್ತುತ ಕೃತಿಕಾರರು ಈ ವಿಷಯದಲ್ಲಿಯೂ ತಕ್ಕ ಮಟ್ಟಿಗೆ ಯಶಸ್ವಿಯಾಗಿದ್ದಾರೆ. ವಿಷಯಗಳನ್ನು ಹಿಂದಣ ಗ್ರಂಥಗಳಿಂದ ಆಯ್ದುಕೊಂಡಿದ್ದರೂ, ಅವನ್ನು ಬಳಸಿಕೊಳ್ಳುವಲ್ಲಿ ಗ್ರಂಥಕರ್ತರು ಸಾಕಷ್ಟು ಜಾಣ್ಮೆಯನ್ನು ತೋರಿಸಿದ್ದಾರೆ. ಗ್ರಂಥಕಾರರಿಗೆ ಈಗಿನಿಂದಲೇ ಪ್ರೋತ್ಸಾಹ ದೊರೆತರೆ ಇನ್ನೂ ತೃಪ್ತಿಕರವಾದ ಚಿರಸ್ಥಾಯಿಯಾದ ಕೃತಿಗಳನ್ನು ರಚಿಸಬಹುದೆಂಬ ಆಸೆಯಿದೆ. ಆ ಆಸೆ ಫಲಿಸಲಿ.

ಧಾರವಾಡ. **ಶಿ. ಶಿ. ಬಸವನಾಳ**

ದಿನಾಂಕ ೨೯—೬—೧೯೪೮ ಸಂಪಾದಕ, "ಜಯಕರ್ನಾಟಕ"

# ಅರಿಕೆ

[illegible]
[illegible]

ಈ ಎರಡು ಏಕಾಂಕ ನಾಟಕಗಳ ಸಂಗ್ರಹವು ನನ್ನ ಮೊದಲಿನ ಹೆಜ್ಜೆ. ಗುಣ ದೋಷಗಳನ್ನು ಅಳೆಯಲು ಸಮರ್ಥರಾದ ಓದುಗರ ಕೈಯಲ್ಲಿ ಇದನ್ನು ಇಡಲಿಕ್ಕೆ ನನಗೆ ಬಹಳ ಆನಂದವೆನಿಸುತ್ತದೆ.

ನಾನು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗಾಗಿ ಅಭ್ಯಾಸ ಮಾಡುತ್ತಿದ್ದಾಗ, ಶ್ರೀ. ಮುಳಿಯ ತಿಮ್ಮಪ್ಪಯ್ಯನವರ "ಕರ್ಣಾವಸಾನ" ಪಾಠದ ಕೊನೆಯ ಪದ ನಮ್ಮ ಕನ್ನಡ ಗುರುಗಳಾದ ಶ್ರೀ. ಟಿ. ಡಿ. ನಾಯಕರವರು ಬಿಗಿದ ಕಂಠದಿಂದ " ನೆನೆಯದಿರಣ್ಣ ಭಾರತದೊಳಿನ್ ಪೆರರಾರುಮಂ ಪೊಂಗೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ " ಎಂದು ಹಾಡಿದಾಗ "ಭಾರತ ವೀರ"ನ ದುರಂತ ಚಿತ್ರವನ್ನು ಚಿತ್ರಿಸಲು ಸಂಕಲ್ಪಿಸಿದ್ದೆನು. ಆದರೆ ಅದೇಕೋ ಏನ ಸಂಕಲ್ಪವು ಸಂಕಲ್ಪವಾಗಿಯೇ ಉಳಿದಿತ್ತು. ಮುಂದೆ, ಹೋದ ವರುಷ ನನ್ನ ಪೂಜ್ಯ ಗುರುಗಳಾದ ಶ್ರೀ. ಎಲ್. ಜಿ. ಹಿರೇಮಠರವರ ಉತ್ತೇಜನದಿಂದ ಈ ನಾಟಕವನ್ನು ಬರೆದು ಮುಗಿಸಿದೆನು. ಈ ಏಕಾಂಕ ನಾಟಕವು ಇದುವರೆಗೆ ಸುಪ್ರಸಿದ್ಧ ಸಾಹಿತ್ಯಕರು ಚಿತ್ರಿಸಿರುವ "ಕರ್ಣನ" ಅಡಿದಾವರೆಗಳನ್ನು ಸೇರ ಬಯಸುವ ಒಂದು ಕಿರಿ ಹೂ ಮಾತ್ರ.

ನನಗೆ ಚಿಕ್ಕಂದಿನಿಂದಲೂ ಆಂಡಯ್ಯನ ವಿಷಯವಾಗಿದ್ದ ಅಪರಮಿತ ಭಕ್ತಿಯೇ ನನ್ನನ್ನು " ಶಿವನ ಸೋಲು " ಬರೆಯಲಿಕ್ಕೆ ಹಚ್ಚಿತು. ಕವಿಯ ಮಾತುಗಳಲ್ಲಿ ಸುಂದರವಾದವುಗಳನ್ನು ಆಯ್ದು ಹಾಗೂ ಕೆಲವನ್ನು ಸೇರಿಸಿ ಈ ಚಿಕ್ಕ ಕೃತಿಯನ್ನು ತಮ್ಮೆದುರು ಇಟ್ಟಿರುವೆ.

ಇನ್ನು ಈ ನಾಟಕಗಳಲ್ಲಿ ಬಳಿಯಿಸಿಕೊಂಡ ಭಾಷೆಯ ವಿಷಯವಾಗಿ ಹೇಳಬೇಕೆಂದರ ಇಲ್ಲಿ ನಾನು ಕವಿವರ " ಕುವೆಂಪು " ಅವರನ್ನು ಹೃತ್ಪೂರ್ವಕವಾಗಿ ನೆನೆಯದೆ ಇರಲಾರೆ.

ನನ್ನ ಮಿತ್ರರು, ಹಾಗೂ ಹಿರಿಯರು ನೆರವನ್ನೀಯದಿದ್ದರೆ ಇದು ಹೊರಗೆ ಬರಲು ಸಾಧ್ಯವಾಗುತ್ತಲೇ ಇರಲಿಲ್ಲ. ಇದರ ಸಂಪೂರ್ಣ ಹೊಣೆಯನ್ನು ಹೊತ್ತುಕೊಂಡು ಬೆಳಕಿಗೆ ತರಲು ಸಹಾಯ ನೀಡಿದ್ದಕ್ಕಾಗಿ ನನ್ನ ಮಿತ್ರರಾದ ಶ್ರೀ. ಡಿ. ಟಿ. ಕಾಯಸ್ಥ ರವರಿಗೂ ಧೈರ್ಯವನ್ನಿತ್ತ ಶ್ರೀ. ಹಳಪೇಟಿಯವರಿಗೂ, ಕಗ್ಗತ್ತಲೆ ಯಲ್ಲಿ ಕೈವಿಡಿದು ನಡಿಸುತ್ತಿರುವ ಮಿತ್ರ ಶ್ರೀ. ತಳವಾರ ಹಾಗೂ ಶ್ರೀ. ಚಂದಾಪುರ ಅವರಿಗೂ ಮತ್ತು ನನ್ನ ಎಲ್ಲ ಕಾರ್ಯಗಳಿಗೂ ಸಹಾನುಭೂತಿಯಿಂದ ನೆರವನ್ನೀಯುತ್ತಿರುವ ಮುಂಡರಗಿಯ ಮಹಾಲ ಅಧಿಕಾರಿಗಳಾದ " ಜಯ " ರಾಯರಿಗೂ ಸಂಗೀತರತ್ನ ಗುರಬಸವಾರ್ಯ ಗವಾಯಿಗಳವರಿಗೂ ಮತ್ತು ಪೂಜ್ಯ ಬ. ಸೋ. ಗೌಡರಮಾಸ್ತರರವರಿಗೂ ನನ್ನ ಅನಂತವಂದನೆಗಳು.

ಕಿರಿಯನ ಕೃತಿಗೆ ಹಿರಿದಾದ ಮುನ್ನುಡಿಯನ್ನು ಬರೆದು ಕೊಟ್ಟು ಆಶೀರ್ವದಿಸಿದ ಶ್ರೀ॥ ಸ್ವಾ॥ ಬಸವನಾಳರವರ ಉಪಕಾರ ವನ್ನು ನಾನೆಂದಿಗೂ ಮರೆಯಲಾರೆ. ಸಹನಶೀಲರೂ, ತ್ಯಾಗ ಮೂರ್ತಿಗಳೂ, ಸುಪ್ರಸಿದ್ಧ ಸಾಹಿತ್ಯಕರೂ, ನಾಡಿನ ಹಿರಿಯರೂ, ಆದ ಅವರ ಆಶೀರ್ವಾದವು ರಕ್ಷಾಕವಚವನ್ನಿತ್ತು, ನನ್ನನ್ನು ಮುನ್ನಡಿ ಸುವದಾಗಿ ನಂಬಿದ್ದೇನೆ.

" ಭಾರತ ವೀರ " ನಾಟಕವು, ಭಾರತ ವೀರನೂ ಅಹಿಂಸಾ ಮೂರ್ತಿಯೂ ಆದ ಮಹಾತ್ಮರಿಗೇ ಅರ್ಪಿಸಬೇಕೆಂದು, ನನಗೆ ಮರೆ ವಿನ ತೆರೆ ಸರಿದಾಗ, ತೆರಿಹರಿದು ಬೆಳಕುದೋರಿದ ನನ್ನ ಗುರು ಗಳಾದ ಶ್ರೀ. ಆರ್. ಸಿ. ಹಿರೇಮಠರವರು ಆಜ್ಞಾಪಿಸಿದ್ದರ ಮೂಲಕ ಈ ಚಿಕ್ಕ ಕೃತಿಯನ್ನು ಮಾನವರು ಮರೆಯದ ಮಹಾತ್ಮರಿಗೆ ಅರ್ಪಿ ಸಿರುವೆ. ಮಳೆಯನೀರು ಕಡಲು ಸೇರುವಂತೆ " ಕಬ್ಬಿಗರ ಕಾವ" ದಿಂದ ಆಯ್ದುಕೊಂಡ " ಶಿವನ ಸೋಲ "ನ್ನು ಮಹಾಕವಿ ಆಂಡ ಯ್ಯನ ಅಡಿದಾವರೆಗಳಲ್ಲಿ ಅರ್ಪಿಸಿರುವೆ.

" ಭಾರತ ವೀರ " ನಾಟಕದ ಹಸ್ತಪ್ರತಿಯನ್ನು ಓದಿನೋಡಿ ಉಪಯುಕ್ತ ಸೂಚನೆಗಳನ್ನು ಇತ್ತುದದಕ್ಕಾಗಿ ಶ್ರೀಮಾನ್ ಸಂ,

ಬ. ನಾಸನೂರ. ಶ್ರೀ. ಅಡಬಡ್ಡಿ, ಶ್ರೀ. ಹನುಮಸಾಗರ ಅವರಿಗೂ, ಮಿತ್ರ ಶ್ರೀ ಹೆಂಡಿ ಹಾಗೂ ಇನ್ನಿತರ ಗೆಳೆಯರಿಗೆ ನನ್ನ ಅನಂತ ಧನ್ಯವಾದಗಳು.

ಈ ಕಿರಿಹೊತ್ತಿಗೆಗೆ ತಮ್ಮ ಅಮೂಲ್ಯವಾದ ಅಭಿಪ್ರಾಯ ಗಳನ್ನಿತ್ತ ಎಲ್ಲ ಸಾಹಿತ್ಯಕರಿಗೂ, ಪ್ರಕಟಿಸಲು ದಯವಿಟ್ಟು ಒಪ್ಪಿಕೊಂಡ ಸಮಾಜ ಪುಸ್ತಕಾಲಯದ ಒಡೆಯರಾದ ಶ್ರೀ.ಬಾಲಚಂದ್ರ ಘಾಣೇಕರ ಅವರಿಗೂ; ಅಂದವಾಗಿ ಅಚ್ಚುಮಾಡಿದ ರವೀಂದ್ರ ಮುದ್ರಣಾಲಯದ ಸಂಚಾಲಕರಿಗೂ, ನನ್ನ ಅನಂತ ವಂದನೆಗಳು.

ಕೊನೆಯದಾಗಿ ಕಣ್ತಪ್ಪಿನಿಂದ ಉಳಿದ ಅಚ್ಚು ದೋಷ ಗಳನ್ನು ಹಾಗೂ ಪ್ರಮಾದದಿಂದುಳಿದ ಭಾಷಾದೋಷಗಳನ್ನು ತಿದ್ದಿಕೊಂಡು ಓದಬೇಕಾಗಿ ಓದುಗರನ್ನು ಪ್ರಾರ್ಥಿಸುತ್ತೇನೆ.

ಬಿ. ಎಂ. ಪಾಟೀಲ.

ಅರ್ಪಣೆ

ಭಾರತದ ದಿವ್ಯಜ್ಯೋತಿ

ಮಹಾತ್ಮರ

ಅಡಿದಾವರೆಗಳಲ್ಲಿ.

# ಮೊದಲನೆಯ ನೋಟ

( ರಂಗಭೂಮಿಯ ಮೇಲೆ ನಸು ಬೆಳಕಿದೆ. ಆನಂದದ ಆವರಣವು ಮೆಲ್ಲನೆ ಮೂಡತೊಡಗಿದೆ. ತೆರೆಯ ಹಿಂದೆ ದೇವದೂತನೊಬ್ಬನು, "ಬಾರಾ ಸಖಿಯೆ ಉಷೆಯೆ ಬಾರಾ" ಎಂಬ ಉದಯರಾಗವನ್ನು ಹಾಡುತ್ತ ಬರುತ್ತಾನೆ. ಅವನು ತೆರೆಯ ಮುಂದೆ ಬಂದನಂತರ ಬೆಳಕು ಸ್ವಲ್ಪ ಹೆಚ್ಚುತ್ತದೆ.)

**ದೂತ** :— ದೇವನಪ್ಪಣೆಯಾಂತು ಜಗವನೆಚ್ಚರಿಸಲ್ಬಂದಿಹೆನು.
ಭಾರತ ವೀರನ ಜನ್ಮ ಗಾನವನು ಹಾಡುವೆನು.
ಹುಟ್ಟುವನು ಶಶಿಕುಲ ಕಮಲನಿಂದು
ದೇವಿ ಕುಂತಿಯು ಪಡೆವ ಮುದ್ದು ಮಗನೆಂದು.

**ಯಕ್ಷ** :— ( ಮತ್ತೊಂದೆಡೆಯಿಂದ ಸಾವಕಾಶವಾಗಿ ಬಂದು )
ಅದಾವ ಉದಯರಾಗವನು ಹಾಡುತಿಹೆ ?

**ದೂತ** :— ನಿಸರ್ಗವನು ಎಚ್ಚರಿಸುತಲಿಹೆ ಯಕ್ಷಾ.

**ಯಕ್ಷ** :— ಅದಾವ ಕಾರಣಂ ದೇವದೂತ ?

**ದೂತ** :— ಕೇಳ್ ಯಕ್ಷ ಕನ್ಯೆ ಕುಂತಿಗೆ ಕಮಲ ಕಾಂತನ
ಕಾರುಣ್ಯದಿಂ ಹುಟ್ಟುವನು ಕರ್ಣನೆಂಬುವನು.
ಜಗದ ಭಾರವನು ತಗ್ಗಿಸುವ ಕುರುಕ್ಷೇತ್ರದಲಿ
ಭಾರತ ಕದನ ಕೈಗಟ್ಟುವದು ಅವನಾಳ್ತನದಲಿ.

**ಯಕ್ಷ** :— ಕನ್ನೆಯೆಂದೊರದೆಯಲ್ಲವೆ ದೇವದೂತ ?

**ದೂತ** :— ಆಹುದಲ್ತೆ. ಸಂಶಯವೇನು ?

**ಯಕ್ಷ** :— ಕನ್ನೆಗೆಂತು ಕುಮಾರ ಹುಟ್ಟುವನು ?

**ದೂತ** :— ಎಲೆ ಯಕ್ಷ ಇದುವೆ ಭಾರತ ಕಥಾಸಾರ.
ಮುನಿಯನೊಲಿಸಿತು ಕುಂತಿಯುಪಚಾರ
ನಲುಮೆಯಿಂದಿತ್ತನೈದು ವರಗಳನು.
ಮೊದಲಿನ ವರವೇ ಕರ್ಣನ ಜನನ.

**ಯಕ್ಷ** :— ಮುಂಬರುವ ಜಗನಗದೆ ಇದು ನೋಡಿ ?

**ದೂತ** :— ಆವ ಕೇಡ್ ಹೇಳು. ಸತ್ಯ ಸಂಧರ ಮುಂದೆ
ಶಕ್ತಿ ತಲೆವಾಗುತಿದೆ ಮತ್ತೆ ಈ ಜಗದಲಿಂದು.
ಹಿಂದು ಮುಂದೆಂದಿಗೂ ಅರಿತವರಿಗೆ
ಅಸಾಧ್ಯವೆಂಬುದಿದೆಯೇ ಮುನಿಗಳಿಗೆ?
ವ್ಯಾಸ ಮುನಿಯು ವರವಿದು ನೋಡು
ವ್ಯಾಸ ಮುನಿದರೆ ಈತನಿಗೆ ಕೇಡು.

**ಯಕ್ಷ** :— ಅರಿತೆ ಅರಿತೆನೆಲೆ ದೇವದೂತ ಬೆಳಗು
ಬರುತಿದೆ ನೋಡು. ಕುಣಿಯುವದು
ಎನ್ನೆದೆಯು ಜನನ ಕಾಲ ಸಮೀಪಿಸಿತೆಂದು.

**ದೂತ** :— ಅಹುದಲ್ತೆ, ಒಡೆಯನಾಣತಿಯನೆಸಗುವೆನು.
ಕೋಕಿಲೆಯೆ ಕೂಗೇಳು ರವಿಸುತ ಬರುವನೆಂದು.
ಜಾತಿ ಜಗಳದ ಕಾಳ್ಗಿಚ್ಚು ಕಡೆಗಾಣಿಸುವನೆಂದು.
ಎಲೆ ಅರಸಂಚೆ ಕೊಳವ ಬಿಟ್ಟೆದ್ದು ಬಂದು;
ನೀಲ ಗಗನದಿ ಪಕ್ಕಗಳ ಹರವಿ ನಿಂದು
ವೀರ ಸುತ ಕರ್ಣನನು ಸ್ವಾಗತಿಸಲೆಂದು
ನಿನ್ನ ರೆಕ್ಕೆಗಳ ಬೆಳ್ಗೊಡೆ ಮಾಡಿ ಹಿಡಿ ಇಂದು.
ಓ ಜಗದಿ ಅಂತ್ಯಜರೆಂದು ಕೊರಗದಿರಿನ್ನು
ಕೆಳಗಿನವರೆಂಬ ಕೀಳ್ಮನವ ಬಿಸುಟಿರಿನ್ನು
ಕೀಳ ಕಸವನು ಕಿತ್ತು ದೂರ ಎಸೆಯುವನಿನ್ನು
ಏಳಿ ಹುಮ್ಮಸದಿ ಸ್ವಾಗತಿಸಿ ಭಾರತ ವೀರನನ್ನು.

**ಯಕ್ಷ** :— ಮೂಡಣದ ಬಾನಿನಲಿ ಕೆಂಪೊಡೆಯುತಿದೆ ನೋಡು
ಜಗದ ಕಣ್ ಬರುವ ಉಬ್ಬಿನಿಂದಲಿ ಹಾಡು.

**ದೂತ** :— ಆ ಕೆಂಪೆ ಕ್ರಾಂತಿಯು ಕೆಂಗಣ್ಣಿನ ನೋಟ
ಮುಂದಿಹುದು ಕಾಳಗವು ಎನ್ನುವಾ ನೋಟ.

**ಯಕ್ಷ** :— ಈ ದಿನ ದಿನಮಣಿಯು ಉತ್ಸಾಹಗೊಂಡು
ಮೂಡಣದ ಗದ್ದುಗೆಯು ಮೇಲೇರಿ ಬಂದು
ಬರುವ ಶುಭ ಕಾಲವನು ಎದುರ್ಗೊಳ್ಳಲೆಂದು
ನೋಡದೊ ಹುಮ್ಮಸದಿ ಮೇಲೇರುವ ನಿಂದು.

**ದೂತ** :— (ಆನಂದದಿಂದ) ಓ ಯಕ್ಷ (ತೆರೆಯ ಕಡೆ ಕೈ ತೋರಿ)
ನೋಡಲ್ಲಿ ಬರುತಿಹಳು ದೇವಿ ಕುಂತಿ
ತ್ರಿಭುವನ ರೂಪವೇ ಇಲ್ಲಿ ಮೈದಾಳ್ದಂತು.

**ಯಕ್ಷ** :— ತೆರೆಯ ಮರೆಯಲಿ ನಿಂತು ಸ್ವಾಗತವನೀಯೋಣ
ದೇವಿಕುಂತಿಗೆ.

**ದೂತ** :— ಅಂತೆಯೇ ಅನುರಗಾನದಲಿ ಸ್ವಾಗತವ ನೀಯೋಣ.

(ತೆರೆಯ ಮರೆಯಲ್ಲಿ ಇಬ್ಬರೂ ಹಾಡುವರು)

ಸುಸ್ವಾಗತವು ದೇವೀ ಕುಂತೀ
ವೀರ ಕುವರನ ಪಡೆಯುವಿ ಇಂದು.
ಬಾರಾ ದೇವಿ ನಗುತಲಿ ಬಾರಾ,
ಮುತ್ತಿನ ಸೆರಗನು ಹೊದೆದು ಬಾರಾ.
ನೊಸಲ ವಿಭೂತಿಯ ಧರಿಸಿ ಬಾರಾ,
ಕುಂಕುಮ ಬಟ್ಟನು ಇಟ್ಟು ಬಾರಾ.
ಹಸಿರು ಸೀರೆಯನುಟ್ಟು ಬಾರಾ,
ಕಂಕಣ ಕೈಗಳ ತಿರುಹುತ ಬಾರಾ.
ಆಗಸ ನಿನ್ನನು ಸ್ವಾಗತ ಗೈಯುತ್ತಿದೆ
ಇಳೆ ತಾ ತಾನೆ ನಗುತಲಿ ಇಹುದು.
ಅಡವಿಯ ಖಗ ಮೃಗ ನಿನ್ನಾ ಬರವನು
ನೋಡುವವಿಂದು ಹೃದಯವ ಕೊಂಡು.
ಹೂವಿನ ಹಾಸಿಗೆ ದಾರಿಯು ನಿನ್ನದು,
ದೇವನ ಆಣತಿ ಇದುವೆ ನಮ್ಮದು.

(ಕುಂತಿಯು ನಗೆ ಮೊಗದಿಂದ ರಂಗಭೂಮಿಯ ಮೇಲೆ ಬರುತ್ತಾಳೆ. ಎಲ್ಲೆಡೆಯಲ್ಲಿಯೂ ಕಲಕಲನಿನಾದವು ಕೇಳಬರುತ್ತಲಿದೆ. ಸುತ್ತಲೂ ಮತ್ತೆ ಮತ್ತೆ ನೋಡಿ.)

**ಕುಂತಿ** :— ಏಕಿಂತು ಸಿಂಗಾರಾಗಿ ಧರೆ ನಿಂತಿಹುದು
ನೋಡಿದತ್ತೆಲ್ಲ ಸಂತಸವೆ ತೋರುವದು.
ಧರೆಯ ಸಿರಿಯನು ಕಂಡು ಮನವರಳುವದು

ಬಹು ದಿನದ ಬಯಕೆ ಮತ್ತೆ ತಲೆ ದೋರುವದು.
ತವಕ ಪಡುತಿದೆ ನನ್ನ ಮೂರ್ಖ ಮನವು
ತಾಯ್ತನದ ಚಿತ್ರಗಳು ಎಚ್ಚತ್ತು ನಿಂತಿಹವು
ವ್ಯಾಸನ ವರವನೇ ಕೈಗೊಟ್ಟು ಕರೆಯುವವು
ಮುನಿವಚನ ಸಟೆದಿಟವೆ ಎಂದು ಶಂಕಿಸುವವು.
ಈಗಲೇ ಹೋಗಿ ಗಂಗೆಯಲಿ ಮೀಯುವೆನು
ಒಂದೆಮನದಲಿ ವ್ಯಾಸ ಮಂತ್ರವನು ಜಪಿಸುವೆನು.
ಪರೀಕ್ಷಿಸುವೆ ಮುನಿಯ ಮಹಾ ಶಕ್ತಿಯನು
ಬಹು ದಿನದ ಮನ ಬಯಕೆಯನು ತಣಿಸುವೆನು.

( ಕುಂತಿಯು ತೆರೆಯಲ್ಲಿ ಮರೆಯಾಗುವಳು. ಯಕ್ಷ ದೇವದೂತರು ಮತ್ತೆ ಬರುವರು. )

**ದೂತ** :— ಕಂಡೆಯಾ ಯಕ್ಷ ಬಯಕೆ ಬಲವಾಗುತಿದೆ.
ಚಣಚಣಕೆ ಗುರಿಯತ್ತ ಎಳೆಯುತಿದೆ.
ಅದು ನೋಡು ಗಂಗೆಯಲಿ ಇಳಿದಳು ದೇವಿ
ಬೊಗಸೆಯಲಿ ಗಂಗೆಯನು ಸಲೆ ತೀವಿ
ತೂರುವಳು ನಭವ ಮುಟ್ಟಲಿ ಎಂದು

**ಯಕ್ಷ** :— ತೂರಿದಾ ನೀರೊಡೆದು ಹನಿಯಾಗಿ
ದೇವಲೋಕದ ಮುತ್ತು ಹರಳುಗಳಾಗಿ
ಮುತ್ತುವವು ಮತ್ತೆ ಕುಂತಿಯನು.
ಬಲವಾದ ಕೈಗಳಿಂ ನೀರನ್ನು ನೂಕುವಳು
ಕಡಲ ಮರಿಮೀನಿನಂತೆ ಈಜುವಳು.
ಕರಘಾತದಿಂ ಸಿಡಿದು ಹಿಂಜರಿದ ನೀರು
ತೆರೆಯಾಗಿ ಬಂದು ದಂಡೆಯನು ಕೊರೆದು
ತಿಳಿನೀರ ಕಲಕುತ್ತ ಕಶ್ಮಲವ ಮಾಡುವದು.

**ದೂತ** :— ನೋಡು ಕನ್ನೆ ಬಂದಳು ನೀರು ಬಿಟ್ಟು,
ಮೈಲಿಗೆ ಬಿಟ್ಟು ಮಡಿಯನೆ ತೊಟ್ಟು,
ಕಾಡು ಹೂಗಳ ಮುದದಿಂದ ಮುಡಿದು

ಸರಸತಿಯು ಮುದ್ದು ಮಗಳಾಗಿಹಳು.
ಬಯಕೆಯನೆ ಜಾನಿಸುತ ನಾಚುವಳು
ತಾಯ್ತನದ ಸವಿಗನಸ ಕಾಣುವಳು.

**ಯಕ್ಷ** :— ಕಂಗಳ ಕಾಂತಿ ಪ್ರಜ್ವಲಿಸುತಿದೆ ನೋಡು
ದಿವ್ಯ ನೋಟವಿದು ಕನ್ನೆಯ ಪಾಡು.

**ದೂತ** :— ಮೂಡಣದ ದಿಶೆಗಭಿಮುಖವಾಗಿ
ಆನಂದ ಮರ್ಯಾದೆಯಿಂ ತಲೆವಾಗಿ
ಕೈಗಳನು ಜೋಡಿಸುತ ನೇಸರಿಗೆ
ನೋಡದೋ ಶರಣು ಶರಣೆನ್ನುತಿಹಳು.

**ಯಕ್ಷ** :— ಬಾಗ ಕಡುನನ್ನಿಗಳು ಬಾನಿನಿಂದೋಡಿ,
ತಮಗನುಗುಣವಾದ ಎಡೆನೋಡಿ,
ದೇವಿ ಕುಂತಿಯು ದಿವ್ಯ ದೇಹದಲಿ
ಮರೆಯಾಗುತಿಹ ಅದ್ಭುತವನೆ ನೋಡು.

**ದೂತ** :— ಬಾಯಿ ವ್ಯಾಸ ಮಂತ್ರವನು ಜಪಿಸುವದು
ಸಗ್ಗ ಸೌಂದರ್ಯ ಸೂರೆಗೊಳ್ಳುವದು.
ಬಾನಬಯಲಿನಲಿ ಕಳೆಗಟ್ಟುತಿದೆ ನೋಡು
ಅಮರಗಾನದಿಂ ತುಂಬುತಿದೆ ಕಾಡು.
ಬೆಂಗದಿರ ಮಣಿವಲಯ ಪ್ರಜ್ವಲಿಸುತಿದೆ
ನಿಸರ್ಗ ನಿಯಮದಿಂ ಕುಣಿಯುತಿದೆ.
ಓ ನೋಡಲ್ಲಿ ಪ್ರಭವಲಯ ಸಿಡಿಯುತಿದೆ
ಎದೆಬೀಣೆ ಸಂತಸಗೊಂಡು ಮಿಡಿಯುತಿದೆ.

( ಸುಮಧುರ ಸಂಗೀತ ಕೇಳಬರುತ್ತದೆ. ರಂಗಭೂಮಿಯು ಮೇಲೆ ಭಯಂಕರ ಬೆಳಕು ಬೀಳುತ್ತದೆ. ದುಂದುಭಿಗಳು ಮೊಳಗುವವು. ಯಕ್ಷ ದೇವದೂತರಿಬ್ಬರೂ ಕುಂತಿಯು ಹೋದದಿಕ್ಕಿಗೆ ಮಣಿಯುತ್ತಾರೆ. )

**ಯಕ್ಷ** :— ಎಲೆ ದೇವದೂತ ಬೆಂಗದಿರು ಬರುತಿರುವ
ಇನ್ನೇನು ಗತಿಯೆಂದು ಕನ್ನೆ ಕಂಗೆಟ್ಟಿಹಳು.

ಹೊಳೆಯುತಿಹ ರತ್ನವಿಳಿಯುತಿದೆ ಧರೆಗಿಂದು
ವ್ಯಾಸ ವಚನವನು ಸತ್ಯಗೊಳಿಸಲೆಂದು.

**ದೂತ** :— ಅಚ್ಚರಿಯು ಅಚ್ಚರಿಯು ಕಾಣುತಿದೆ
ಬೆಂಗದಿರು ತಂಗದಿರಾಗಿ ತೋರುತಿದೆ
ಧರೆಯ ಭಾಗ್ಯದ ಸಿರಿಯು ಬರುತಿದೆ
ನೋಡು ನಭೋಮಂಡಲವು ಬೆಳಗುತಿದೆ.

**ಯಕ್ಷ** :— (ಹರ್ಷದಿಂದ) ಮನವಿದ್ದಲ್ಲಿ ಮಾರ್ಗವಿದೆಯೆಂದು
ಸಾರುತಿದೆ.

**ದೂತ** :— ಕನ್ನೆ ಕುಂತಿಯ ಮುಂದೆ ನಿಂತಿಹನು ದೇವ
ದರಹಸಿತ ವದನಾಗಿ ಕುಂತಿಯನು ಕೇಳ್ವ
ಆವ ಕಜ್ಜವಿದೆ ಹೇಳು ಲಲನೆ ಎಂದು.

**ಯಕ್ಷ** :— ಕನ್ನೆ ಮಾಡುತಿಹಳೇನೀಗ ?

**ದೂತ** :— ದೇವನಿಗೆ ಪೊಡಮೊಟ್ಟು ನಿಂತಿಹಳು
ವರಸತ್ಯತೆಯ ಕಾಣಲೆಂದು ಕರೆದೆನೆನ್ನುವಳು.
ಕನ್ನೆಗೆ ಕುಮಾರ ಬೇಡ ಬೇಡವೆನ್ನುವಳು
ತಿರು ತಿರುಗಿ ಪೊಡಮೊಟ್ಟು ಕಾಡುವಳು.

**ಯಕ್ಷ** :— ನೇಸರು ನುಡಿಯುತಿಹ ಕಿವಿಗೊಡು.

**ದೂತ** :— ( ಆಲಿಸಿದಂತೆ ನಟಿಸಿ )
ಹೇಳುವನು ರವಿ ಮಂತ್ರ ಸಟೆಯಾಗದೆಂದು
ಧೈರ್ಯದಲಿ ಹೊಂದು ಕುಮಾರನನು ಎಂದು
ಕರುಣಿಸಿದ ಕಾರುಣ್ಯದಲಿ ಕುಮಾರನನು
ಕುಂತಿಯುದರವ ಸೊಡೆದು ಬರುತಿದೆ ನೋಡು.
ದಿವ್ಯ ಸತ್ ಚಿತ್ ಕಳೆಯು ರೂಪಗೊಂಡು.

( ರಂಗ ಭೂಮಿಯ ಮೇಲೆ ಮನೋಹರವಾದ ಬಣ್ಣಬಣ್ಣದ ಬೆಳಕು ಬಿದ್ದದ್ದನ್ನು ಕಂಡು )

**ಯಕ್ಷ** :— ತೊಳಗುತಿಹ ಕಾಂತಿ ಯಾವುದಿದು ದೇವದೂತ ?

**ದೂತ** :— ಹುಟ್ಟಿನಿಂದಲಿ ಕುವರ ಪಡೆದಿಹನು
ಭೇದಿಸಲಸಾಧ್ಯ ಕವಚ ಕುಂಡಲಗಳನು.
ಅವುಗಳ ಪ್ರಭೆ ಹರಡುತಿದೆ ಜಗದಿ
ಮುಂಬರುವ ಜತದ ಮುಂಬೆಳಕೆಂದು.

**ಯಕ್ಷ** :— ಜಗವೆಂದು ಕಾಣದಚ್ಚರಿಯು ಕೇಳೆಯು.
ದೇವಿ ಈ ಎಡೆಗೆ ಬರುವಂತೆ ತೋರುತಿದೆ.

**ದೂತ** :— (ನೋಡಿ) ಹರುಷದಿಂದವಳ ಕೆನ್ನೆ ಕೆಂಪೇರುತಿದೆ
ಜಗದ ಭಯವಾವರಿಸಿ ಬೆವರೊಡೆಯುತಿದೆ.
ಈ ನೋಟ ಸುಖ-ದುಃಖಗಳ ಮಧುರ ಮಿಲನ.
ನಾವಿನ್ನು ತೆರಳೋಣ. ( ಹೋಗುವರು )

( ಕುಂತಿಯು ಕುಮಾರನನ್ನೆತ್ತಿಕೊಂಡು ಭಯ-ಸಂತೋಷಗಳಿಂದ ಕೂಡಿ ಸಾವಕಾಶವಾಗಿ ಬರುತ್ತಾಳೆ. )

**ಕುಂತಿ** : — ಓ ನನ್ನ ಕಂದನ್ನು ನಿನ್ನ ಮೊಗನೋಡಿದೊಡೆ
ಉಕ್ಕುವದು ಸಂತಸದ ಕಡಲಿನ್ನ ಕಣ್ಣಿಂದ.
ಜೋಗುಳದ ಹಾಡುವದು ಎದೆಯೊಲವು
ಅದರ ತಾನಕೆ ಮಿಡಿಯುವದು ಹೃದಯ ವೀಣೆ.
ಕುಡಿಯಲೆಂಬಂತೆ ನನ್ನನೇಕೆ ನೋಡುತಿಹೆ ಮಗೂ
ದೈವಹೀನಗಳ ಮಗನಾದೆನೆಂದಳುಕುತಿಹೆ ಏನು ?
ಭೂದೇವಿ ಬಾಯ್ದೆರೆದು ಎನಗಾಶ್ರಯವ ನೀಡು
ಜಗದ ಮಿಥ್ಯಾಪವಾದವನು ದೂರ ಮಾಡು.
ಧರಣಿ ದೂರಿಗೆ ಅಂಜಿ ನನ್ನ ಕಣ್ಣುಕುರುಡಾಗುತಿವೆ.
ಎದೆ ಬಿರಿಯುತಿದೆ. ಕಿವಿ ಕಿವುಡಾಗುತಲಿವೆ.
ಪತಿಯಿಲ್ಲದಲೆ ಪುತ್ರನನು ಪಡೆದವರ ಬಾಳು
ಹಿಂದು ಇಂದು ಮುಂದೆಂದಿಗೂ ಹಾಳು.

(ದುಃಖಿಸುತ್ತಿರುವಾಗ ಬಾನುಲಿ ಕೇಳ ಬರುತ್ತದೆ )

ಬೆದರದಿರು ತಾಯೆ ಕಂಗೆಡದಿರು
ವೀರ ಮಾತೆಯಲ್ಲವೆ ನೀನು,

ಪೆಟ್ಟಿಗೆಯೊಳಿಟ್ಟು ಮಗವನು ಬಿಸುಟು
ಗಂಗೆಯೊಳು, ರಕ್ಷಿಸುವ ಸೂತ.

( ಕುಂತಿಯು ಕಿವಿಗೊಟ್ಟು ಕೇಳಿ ಅನಂತರ )

**ಕುಂತಿ** :— ಬಾನುಲಿಯು ಸಾರುತಿದೆ ಏನೆಂದು ?
ಅಲ್ಲವೆ ಗಂಗೆಯಲಿ ಮಗನನ್ನು ಹಾಕೆಂದು,
ಆಗಸವೇ ತಾಯ್ತನದ ಕರುಳಿಷ್ಟು ಕೀಳೆಂದು
ಬಗೆದೆಯಾ, ಇದು ಮೂರ್ಖತನವೆಂದರಿಯೆಯಾ.

( ಮತ್ತೆ ಬಾನುಲಿ ಕೇಳುವದು )

ಇದು ದೇವನಾಣತಿ ದೇವಿ
ಚಿಂತೆಯನು ಬಿಡು ತಾಯಿ
ಬಾಳುವನು ನಿನ್ನ ಕುವರ
ಮುಂದೆ ಭಾರತವೀರನಾಗಿ.

**ಕುಂತಿ** :— ಬಿದಿನಿಯಮ ಇನಿತು ಕ್ರೂರವೇ.

( ಮಗುವಿನತ್ತ ನೆಟ್ಟ ನೋಟದಿಂದ )

ಮಗುವೆ ತಂದೆಯಿಲ್ಲದ ಸುತನಿವನೆಂದು
ಸತ್ವಹೀನ ಜಗನಗದಿರಲಿ ಮುಂದೆಂದು
ಹೃದಯವನು ಕಲ್ಲಾಗಿ ಮಾಡುವೆನು
ನಿನ್ನ ಜತಕಾಗಿ ಗಂಗೆಯಲಿ ಹಾಕುವೆನು.

( ಮಗುವನ್ನು ಅಲ್ಲಿಯೇ ಬಿದ್ದ ಪೆಟ್ಟಿಗೆಯಲ್ಲಿಟ್ಟು ಮೇಲೆ ಎಲೆಗಳನ್ನು ಹೊದಿಸಿ ನದಿಯತ್ತ ತಿರುಗಿ )

ಓ ತಾಯೆ ಮಗನನ್ನು ನಿನ್ನೊಡಲೊಳಿರಿಸುವೆನು.
ನನ್ನ ಮಗನಲ್ಲವೆಲೆತಾಯಿ ನಿನ್ನ ಮಗನಿವನು
ಕಾಯುವದು ಕರುಣೆಯಿಂ ಶೈಲಜಾತೆ.

( ತೆರೆಯೊಳಗೊಯ್ದು ನದಿಯಲ್ಲಿ ಬಿಟ್ಟು, ಪುನಃ ರಂಗಭೂಮಿಯ ಮೇಲೆ ಬಂದು ನದಿಯತ್ತ ಕೈಮುಗಿದು ನಿಲ್ಲುವಳು. ತೆರೆ ಬೀಳುವದು. )

———

# ಎರಡನೆಯ ನೋಟ



(ಮುಂಜಾವಿನ ಸಮಯ. ಸೂತನ ಮನೆಯೊಂದರಲ್ಲಿ ಸೂತನ ಹೆಂಡತಿ ರಾಧೆ **ಬಾಗಿಲು**ಕಡೆ ಬೆನ್ನು ಮಾಡಿಕೊಂಡು ಅಕ್ಕಿಯನ್ನು ಹಸನಮಾಡುತ್ತಿದ್ದಾಳೆ. ಅಟ್ಟದ ಮೇಲೆ ಹಳೆಯ ತೊಟ್ಟಿಲೊಂದು ಧೂಳಿಡಿದು ಮೂಲೆಯಲ್ಲಿದ್ದದ್ದು ಕಂಡು ಬರುತ್ತಿದೆ.)

**ರಾಧೆ :—** (ಬಾಗಿಲತ್ತ ನೋಡಿ)

ಮೂರು ತಾಸಿನ ಬಿಸಿಲು ಬೀದಿಯನು ಸುಡುತಿದೆ
ನನ್ನೆದೆಯು ಬಂಜೆತಾನೆಂದು ಬಿರಿಯುತಿದೆ.
ಮಕ್ಕಳಿಲ್ಲದ ಮಡದಿಯ ಬಾಳೊಂದು ಮಸಣ
ಇಹಲೋಕದಲ್ಲಿರಲಿ ಸಗ್ಗದಲಿಯೂ ಇಲ್ಲ ತಾಣ.

(ಮತ್ತೆ ಬಾಗಿಲತ್ತ ನೋಡಿ)

ನೇಸರುದಿಸುವ ಮುನ್ನ ಮೀಯಲೆಂದು
ಎನ್ನಿನಿಯ ಹೋದವನು ಇನ್ನೇಕೆ ಬರಲಿಲ್ಲ.

(ತೊಟ್ಟಿಲತ್ತ ನೋಡಿ ದುಃಖದಿಂದ)

ಅಣಕಿಸುವೆಯಾ ತೊಟ್ಟಿಲವೆ ನನ್ನ ನೋಡಿ
ಬಿದಿನಿಯಮ ತಾನೆ ನನ್ನನೀಗತಿ ಮಾಡಿ
ನಿನ್ನ ರೂಪದಿ ಬಂದು ಅಣಕವಾಡುತಿದೆ
ನಿನ್ನ ಬಾಳ್ ನಾಯ ಬಾಳೆಂದು ನಗುತಿದೆ.
ಹತ್ತುಸಾವಿರ ದೇವರಿಗೆ ಹರಿಕೆಗಳ ಹೊತ್ತೆ
ತಪ್ಪದಲೆ ನಿಯಮಗಳ ಮಾಡುವೆನು ಮತ್ತೆ
ದಿನದಿನವೂ ಕೊರಕೊರಗಿ ನೋಯುವೆನು.

(ಸೂತನು ಮುದ್ದು ಮಗುವೊಂದನ್ನು ತೆಗೆದುಕೊಂಡು ಮೆಲ್ಲನೆ ಬರುತ್ತಾನೆ. ಬಂದು ಮಗುವನ್ನು ಹಾಸಿಗೆಯ ಮೇಲೆ ಮಲಗಿಸಿ ಮೆಲ್ಲಗೆ ರಾಧೆಯಹತ್ತಿರ ಹೋಗಿ ಅವಳ ಕಣ್ಣು ಮುಚ್ಚಿ)

**ಸೂತ** :— ಚನ್ನೆ; ನ. ನಾರು ಹೇಳುವಡೆ ಕೈ ಬಿಡುವೆ.

**ರಾಧೆ** :— ಆರ್ಯರ್ ಲಲನೆಯರ ಮೈ ಸೋಂಕುವವರು ಅವರೊಲು
ಮೆಯ ಗಂಡರಲ್ಲದೆ ಮತ್ತಾರು ?

**ಸೂತ** :— ಪ್ರಿಯವಾದುದನೆ ನುಡಿದೆ ನನ್ನ ಕನ್ನಡವಕ್ಕಿ.
ಒಲುಮೆಯ ಕಾಣಿಕೆ ಕೊಡುವೆ ಜಲಜಾಕ್ಷಿ.

**ರಾಧೆ** :— ನನ್ನೊಲುಮೆಯ ಕಾಣಿಕೆಯನರಿತಿಹನೆ ಕಾದಲ ?
ನಾನರಿವೆ ಅರೆವಿರಿದ ತಾವರೆಗಳವು ಎಂದು.
ನನ್ನೆದೆಯು ಬಯಸುತಿಹ ಕಾಣಿಕೆಯು ಅದು ಅಲ್ಲ.

**ಸೂತ** :— ಹೆಣ್ಣ ಬಾಳಿನ ಬಯಕೆಯನರಿತೆ ತಂದಿರುವೆ.
ಊಹಿಸಿ ಜಾಣ್ಮೆಯಲಿ ಹೇಳುವಡೆ ಕೊಡುವೆ.

**ರಾಧೆ** :— ಸುಮಂಗಲೆಗಲಂಕಾರ ಕುಂಕುಮವು ಅದು ತಾನೆ ?

**ಸೂತ** :— ಊಂ ಹೂಂ ......ಮತ್ತೆ

**ರಾಧೆ** :— ಕಮಲ ಕರಗಳಿಗೊಪ್ಪುವ ಬಳೆಗಳಲ್ಲವೆ ?

**ಸೂತ** :— ಅಲ್ಲ. ಮುಂದೆ.

**ರಾಧೆ** :— ಸಿರಿಗಂಧವ ಕೊರಡೇನು ಹೇಳಿನಿಯ.

**ಸೂತ** :— ತರ್ಕಶಾಸ್ತ್ರ ಕಲಿಸಲಿಲ್ಲವೆ ನಿಮ್ಮ ತಾತ. (ನಗುವ)

**ರಾಧೆ** :— (ಮುಸಿಮುಸಿನಗುತ) ಬಿಡಿ. ಚಿನ್ನವರಿಸಿಣ ತಾನೆ ?

**ಸೂತ** :— (ನಗುತ್ತ ಕೈಬಿಟ್ಟು) ಒಂದೂ ಅಲ್ಲ. (ಮಗುವನ್ನು ತೋರಿಸಿ)
ಅದು ನೋಡು ನಲುಮೆಯ ಕಾಣಿಕೆ. ನಗುವ ಮಗ.

**ರಾಧೆ** :— (ಕಣ್ಣುಜ್ಜಿಕೊಂಡು ದಿಟ್ಟಿಸಿನೋಡಿ ಓಡಿಹೋಗಿ ಮಗುವನ್ನೆತ್ತಿ ಕೊಂಡು )
ಈ ಮುದ್ದು, ಯಾರ ಮಗ ?

**ಸೂತ** :— (ಆಕಾಶದತ್ತ ಕೈದೋರಿ) ಆಗಸವರಿವುದು

**ರಾಧೆ** :— ಹುಡುಗಾಟ ಸಾಕಿನ್ನು, ಒಡೆಯಲಾರದ ಒಗಟು
ಹೇಳಿನಿಯ ಆರವಂಶದ ಕುಡಿಯು ಈ ಕುವರ ?

**ಸೂತ** :— ಇಂದು ಗಂಗೆಯಲ್ಲಿಂದು ರವಿಯನ್ನೆ ನೋಡುತ್ತ

**ರಾಧೆ** :— (ನಡುವೆ) ಮುಂದೆ.

**ಸೂತ** :— ತಾಳು ತಾಳೆಲೆ ರಾಧೆ.

**ರಾಧೆ** :-- ( ಸ್ವಗತ ) ತಾಯ್ತನದ ಹಂಬಲವ ಗಂಡಸರೇನು ಬಲ್ಲರು (ಪ್ರಕಾಶವಾಗಿ) ಕಿವಿ ಕಾದು ಸಂಶಿಸಿ ಹೇಳೆನ್ನ ಮನದನ್ನ.

**ಸೂತ** :— ರವಿಗರ್ಘ್ಯಕೊಡಲೆಂದು ಜಿಂಗನೆಯಲಿ ನೀರೆತ್ತು- ತಿರುವಾಗ ಕೈಗೆ ತಾಕಿತು ಪೆಟ್ಟಿಗೆಂಯೊಂದು ರವಿಯಲ್ಲಿ ನೆಟ್ಟನೋಟವ ಕಿತ್ತು ಪೆಟ್ಟಿಗೆಯ ತಂದು ಬಾಯ್ದೆರೆದು ನೋಡಲು ಕಂಡೆ ಕುಮಾರನನು.

**ರಾಧೆ** :— (ಸ್ವಗತ) ರೋಮಾಂಚನಗಳೇಳುತಿವೆ. (ಆನಂದದಿಂದ) ಉಕ್ಕುತಿವೆ ಮೊಲೆವಾಲು (ಪ್ರಕಾಶವಾಗಿ) ಹಸಿವಿಹನೇನೋ ಕಂದ.

**ಸೂತ** :— ಬಹುದಿನದ ನಿನ್ನ ಬಯಕೆಯನೆ ನೀಡಿಹೆನು ಪ್ರತಿಫಲವ ನೀಗ ನಿನ್ನಿಂದ ಬೇಡುವೆನು.

**ರಾಧೆ** :— ಸೇವಕಳು ಸಿದ್ಧಳಿಹಳು ... ... ... ...... .... ....... .......

**ಸೂತ** :— (ನಡುವೆ) ಹಾಗೆನ್ನದಿರು ಬಿನ್ನೆ, ಆರ್ಯ ಮಡದಿಯರು ತೊತ್ತುಗಳಲ್ಲ ಸೂರ್ಯ ಚಂದ್ರರೆದುರು ಕೈಹಿಡಿದು ಅರ್ಧಾಂಗಿ ಎನಿಸಿರಲು ಸೇವಕತನಕೆಡೆಯಿಲ್ಲ ನನ್ನರಾಧೆ.

**ರಾಧೆ** :— (ಕೂಸಿನತ್ತ ತಿರುಗಿ) ಇರಲಿ ನೋಡಿರಿಲ್ಲಿ. ನಗುತಿಹನು ನನ್ನ ಕಂದ. ತಾಯಿ ಇಲ್ಲಿಂದು ಕೊರಗದಿರು ಕುಮಾರ ಕಣ್ಣು ಕುಕ್ಕುವ ತೇಜದ ಮಗನ ಹೊಳೆಯಲಿ ನೂಕುವ ಕಷ್ಟವೇನ್ಬಂದಿತೋ ತಾಯಿಗೆ (ಮರುಗುವಳು)

**ಸೂತ** :— ಮರುಗದಿರು ಚಿನ್ನಾ ಬೊಮ್ಮ ಬರೆದ.

**ರಾಧೆ** :— ಏನು ಬರೆದನ್ನೋ ದೇವನೇ ಬಲ್ಲ. ವಿಧಿ ನಿಯಮ ಅಬಲೆಯರ ಮೇಲೇಕೆ ತೋರುವನು ತನ್ನ ಶೌರಿಯುವ.

**ಸೂತ** :— (ನಿರುತ್ತರನಾಗಿ ಬಿದಿಗೆ ಹೆಣ್ಣು ಗಂಡೆಂಬ ಭೇದವೆಲ್ಲಿಯದು?

**ರಾಧೆ** :— ಹಾಗಾದರೆ ಇದಾರ ಕರ್ಮವು ?

**ಸೂತ** :— ದೇವನದು.

**ರಾಧೆ** :— ದೇವ, ದೇವ, ಜಗದ ಪಾಪಕೆ ನಿನ್ನ ಮೋಹವೆಯೆ ಮೋಸದಲಿ ಕನ್ನೆಯರ ಮೋಹಿಸುತ್ತ

ಮೇಲೆ ಪ್ರೇಮದ ತೆರೆಯು ಸೆಳೆಯುತ್ತ
ಕಾರ್ಯವಾದೊಡನೆ ಕೈಬಿಡುವ ಗಂಡಸರದೀ ಕೆಲಸ.

**ಸೂತ** :— ರಾಧೆ ಏಕಿಂತು ಮುನಿಸುತಿಹೆ ?

**ರಾಧೆ** :— ಮುನಿಸಲ್ಲ ಮನದನ್ನ ಇದು ಜಗದ ರೀತಿಯು.
ಕಾಮಾಂಧ ಗಂಡಸರ ಕನ್ನೆಯರ ಬಯಕೆಯು.
ಕೈಹಿಡಿವೆನೆಂದು ಕನ್ನೆಯರ ಕಾಮಿಸುತ
ತೃಷೆಯಾರಿದೊಡನವರ ಒದ್ದೋಡಿಸುತ
ಸಮಾಜದಲಿ ಅಗ್ರಗಣ್ಯರೆಂದೆನಿಸುವವರ
ದುರ್ನೀತಿಯಲ್ಲವೇ ಹೇಳಿನಿಯ ಈ ಮೋಸ.

**ಸೂತ** ;— ಮಾನವನ ಮೌಢ್ಯವೋ, ದೇವನ ಲೀಲೆಯೋ
ನಾನು ಹೇಗೆ ಹೇಳಲಿ ರಾಧೆ.

**ರಾಧೆ** :— ತೆರೆಯ ಮರೆಯಲಾಡುವ ನಾಟಕವಿದು ಸಾಕು
ಕನ್ಯೆಯರು ಇನ್ನಾದರೂ ಕಣ್ದೆರೆಯ ಬೇಕು.
( ಕೂಸು ಅಳುತ್ತಿದೆ. ಅದನ್ನು ಸಂತೈಸುತ್ತ )
ಅಳಬೇಡ ಕಂದಮ್ಮ ತಾಯಾಗಿ ಸಾಕುವೆನು
ನಿನಗಾಗಿ ನನ್ನ ದೇಹವನೆ ಸವಿಸುವೆನು
ಹಸಿವೆಯಾಗಿಹುದೆ ಮಗೂ ಹಾಲುಣಿಸುವೆನು.

**ಸೂತ** :— ರಾಧೆ ತೊಟ್ಟಿಲವ ಕಟ್ಟಲೆ ?....?

**ರಾಧೆ** :— ಮಮತೆಯಲಿ ಮರೆತಿದ್ದೆ ಹೌದಿನಿಯ.

(ಸೂತನು ತೊಟ್ಟಿಲವನ್ನು ಕಟ್ಟುತ್ತಾನೆ. ರಾಧೆಯು ಹಾಲುಣಿಸಿ ಮಗುವನ್ನು ತೊಟ್ಟಿಲಲ್ಲಿ ಹಾಕುತ್ತಾಳೆ. ಹಾಕಿ ತೂಗುವಳು. ಸೂತನು ಆನಂದದಿಂದ ರಾಧೆಯ ಕಡೆಗೊಮ್ಮೆ ತೊಟ್ಟಿಲದ ಕಡೆಗೊಮ್ಮೆ ನೋಡುತ್ತಿರುವನು. ರಾಧೆಯು ಜೋಗುಳ ಹಾಡುವಳು.)

ಜೋ ಜೋ ಎನ್ನ ಪ್ರೇಮದ ಕಂದಾ।
ನಿನಗಾಗಿ ತೂಗುವೆ ತೊಟ್ಟಿಲು ಚಂದಾ ॥ ೧ ॥

ರಾಧೆಯ ಬಾಳನ್ನು ಬೆಳಗಲು ಬಂದೀ।
ನನ್ನ ಐಶ್ವರ್ಯವ ಮರಳೀ ತಂದೀ ॥ ೨ ॥

ನಿನಗಾಗಿ ಹಾಡುವೆ ಮಲಗೆನ್ನ ಮಗುವೆ।
ನಿನಗಾಗಿ ಬಣ್ಣದ ತೊಟ್ಟಿಲ ತೂಗುವೆ ॥ ೩ ॥

ತಾಯ್ತನದ ಚಿಂತೆಯು ಬಿಡಿಸಿದಿ ಕುವರ ।
ಜಯ ಭುವನೇಶ್ವರಿ ಮುಗಿವೆನು ಕರವ ॥ ೪ ॥

**ಸೂತ** :-- (ಮಗುವು ಮಲಗಿದ್ದನ್ನು ಕಂಡು)
ನನ್ನ ಪ್ರತಿಫಲವ ಮರೆತೆಯಾ ಮನದನ್ನೆ.

**ರಾಧೆ** :— ಮರೆವುದುಂಟೆ ಹೇಳಿನಿಯ

**ಸೂತ** :— ಅದು ಬಹುಗುಟ್ಟು ನೋಡು ಜನ್ನೆ.

**ರಾಧೆ** :-- ಅನುಮಾನವೇಕೆ ?

**ಸೂತ** :-- ಕಿವಿಯಲುಸುರುವೆನು.

**ರಾಧೆ** :— ಆಗಬಹುದು.

**ಸೂತ** :— (ಹತ್ತಿರಹೋಗಿ ಹೇಳುವನಂತೆ ನಟಿಸಿ ಮುತ್ತಿಡುವ)

**ರಾಧೆ** :-- ( ನಾಚಿನಗುತ್ತ ) ಬಿಡಿ.

—: ತೆರೆ :—

——— ———

# ಮೂರನೆಯ ನೋಟ

(ದೊಡ್ಡ ಕ್ರೀಡಾಂಗಣ. ಅಲ್ಲಲ್ಲಿ ಸಿಂಗರಿಸಿದ ಆಸನಗಳು. ನಡುವೆ ಉಚ್ಚಾಸನ. ಅದರ ಹತ್ತಿರ ತರತರದ ಆಯುಧಗಳು ಇಡಲ್ಪಟ್ಟಿವೆ. ಅಂತರಿಕ್ಷದಲ್ಲಿ ಕಾಯೊಂದು ತೂಗಾಡುತ್ತಿದೆ. ಪ್ರೇಕ್ಷಕರು ಕಿಕ್ಕಿರಿದು ತುಂಬಿರುತ್ತಾರೆ. ಒಬ್ಬನು ತೇಕುತ್ತ ಧಾವಿಸಿ ಬರುತ್ತಾನೆ)

**ಬಂದವ**:— ಚೆನ್ನಾಯಿತು, ನನ್ನ ದೈವ ನೆಟ್ಟಗಿದೆ.

(ಪ್ರೇಕ್ಷಕರು ಅವನ ಕಡೆ ನೋಡುತ್ತಾರೆ ಅವರಲ್ಲೊಬ್ಬ)

**ಒಬ್ಬ** :— ಅವಸರದ ಕಾರಣವೇನು ಸ್ವಾಮಿ ?

**ಬಂದವ** :— ನೀವೆಲ್ಲ ಕಾರಣವನರಿಯದಲೆ ಬಂದಿರಾ. ?

**ಒಬ್ಬ** :— ಇಂದು ದ್ರೋಣಾಚಾರ್ಯರ ಶಿಷ್ಯವೃಂದದ
ಪರೀಕ್ಷೆ. ನೋಡಲೆಂದು ಬಂದಿರುವೆವು

**ಬಂದವ**:— ಮತ್ತೇನು ತಿಳಿದಿರುವೆ ?

**ಒಬ್ಬ** :— ಇನ್ನರಿಯೆವು.

**ಬಂದವ**:— ಕೇಳಯ್ಯ, ವೀರ ಕಲಿಕರ್ಣ ಬರುವನಿಂದು.

**ಒಬ್ಬ** :— ಅವನಾರು.

**ಬಂದವ**:— ಅದೊಂದು ಭೂಮಿಗತ ಭಂಗಾರ
ಜಗವರಿಯುವಂತೆ ಸೂತ ಕುಮಾರ.
ತ್ರೀಲೋಕವೀರ ಪರಶುರಾಮನ ಪ್ರಿಯ ಶಿಷ್ಯ.

**ಒಬ್ಬ** :— (ಆಶ್ಚರ್ಯದಿಂದ) ಇಪ್ಪತ್ತೊಂದು ಸಾರೆ
ಕ್ಷತ್ರಿಯರ ನೆತ್ತಿಯ ನೊಡೆದ ವೀರನ ಶಿಷ್ಯ.

**ಬಂದವ**:— ಅಹುದು. ಆದರೆ ಪ್ರೀತಿಯಲಿ ಮುಳ್ಳೊಂದು
ಮುರಿದಿದೆ. ಕರುಳಿನಲಿ ಕತ್ತರೆಯನಿಕ್ಕಿದೆ.

**ಒಬ್ಬ** :— ಅದೇನು ?

**ಬಂದವ**:— ಕ್ಷತ್ರಿಯರ ಮತ್ತೆ ಕೊಲಲೆಂದು
ಜಗದ ಅನ್ಯಾಯವನು ತಡೆಯಲೆಂದು
ಭಾರ್ಗವ ಬ್ರಾಹ್ಮಣ ವೀರನನು ಹುಡುಕುತಲಿದ್ದ.
ಸೂತತಾನೆಂದು ತಿಳಿಸಿದರೆ ವಿದ್ಯೆಸಿಗದೆಂದು
ವೇಷವನು ಮಾಜಿ, ಬ್ರಾಹ್ಮಣನು ತಾನೆಂದು
ಕಲಿಯುತಲಿದ್ದ ಕಲಿಕುಮಾರನವನಲ್ಲಿ.

**ಒಬ್ಬ** :— ಸಹಜ ಮುಂದೆ.

**ಬಂದವ**:— ಗುರು ವೊಂದುದಿನ ವಿಶ್ರಾಂತಿಗೆಂದು,
ಕುಮಾರನ ತೊಡೆಯ ಮೇಲ್ಮಲಗಿದಂದು,
ಗುಂಗಾರು ತಾನೊಂದು ತೊಡೆಯ
ಕೊರೆಯ ಹತ್ತಿತು ನೋಡು ಕೆಳೆಯ.

**ಒಬ್ಬ** :— ( ಉದ್ವೇಗದಿಂದ) ಆ ಮೇಲೆ ?

**ಬಂದವ**:— ಮಿಸುಕಾಡಿದರೆ ಗುರುವಿನ ನಿದ್ರೆ ಭಂಗವೆಂದರಿತು
ಸುಮ್ಮನಿರೆ, ಬಿಸಿರಕುತ ತಾಗಿದೊಡೆ ಎಚ್ಚತ್ತು ಗುರು
ನೋಡುತ್ತ ಮುಳಿಸಿನಿಂದಲೆ ವೀರನನು ಕೇಳಿದನು.

**ಒಬ್ಬ** :— ಏನೆಂದು ?

**ಬಂದವ**:—ನಿನ್ನ ತಾಳ್ಮೆಯಿದು ಕ್ಷತ್ರಿಯರದು
ನೀ ಬ್ರಾಹ್ಮಣನಲ್ಲ ನಿಜವ ಪೇಳುವದು.

**ಒಬ್ಬ** :— ನಡುಗಿವನೆ ಕುಮಾರ ?

**ಬಂದವ**:— ವೀರನಲ್ಲನೆ ಆತ. ಹೌದೆಂದು ಒಪ್ಪಿದನು.
ಗುರಮುಸಿದು ಒಡನೆ ಶಾಪವನಿತ್ತನು.

**ಒಬ್ಬ** :— ಅನ್ಯಾಯ, ಅನ್ಯಾಯ. ಏನೆಂದು !

**ಬಂದವ**:—ಅವಸಾನ ಕಾಲದಲಿ ತಾನಿತ್ತ ವಿದ್ಯೆ ವ್ಯರ್ಥವಾಗಲಿ
ಎಂದು ಮತ್ತೆ ಹೊರನೂಕಿದನು. ಜಾತಿ ಜಗಳದಲಿ
ಹಾಳಾಯ್ತು ನಮ್ಮ ನಾಡು.

**( ಕೂಡಲೆ ಪ್ರೇಕ್ಷಕರು ‟ ಆಚಾರ್ಯರು ಬಂದರು ” ಎಂದು ಕೇಕೆ ಹಾಕುವರು.)**

ಒಬ್ಬ :— ಬರುವ ಜಂಗುಳಿಯಲ್ಲಿ ಕರ್ಣನಾರು.
ಬಂದವ:— ಕೌರವೇಶ್ವರನ ಎಡಭಾಗದಲ್ಲಿರುವ ನೋಡು.
ವೀರರನು ಮನ್ನಿಸಿ ಕರೆವವನು ಕೌರವನು.

( ಅಷ್ಟರಲ್ಲಿ ದ್ರೋಣಾಚಾರ್ಯ, ಭಿಷ್ಮ, ಅರ್ಜುನ, ಭೀಮ, ಕೌರವ ಮೊದಲಾದ ಎಲ್ಲ ಶಿಷ್ಯರೂ ಬಂದು ಕುಳಿತುಕೊಳ್ಳುವರು. ಭೀಷ್ಮನು ದ್ರೋಣಾಚಾರ್ಯರ ಕೈ ಹಿಡಿದು ಅಗ್ರ ಪೀಠದ ಮೇಲೆ ಕೂಡ್ರಿಸುವನು. ಕರ್ಣನು ದುರ್ಯೋಧನನ ಎಡಗಡೆ ಕೂಡ್ರುವನು. ಕುಂತಿ ಮೊದಲಾದ ರಾಜ ವಾಸದವರು ಹೆಣ್ಣು ಮಕ್ಕಳಿಗಾಗಿ ಕಾಯ್ದಿಟ್ಟ ಸ್ಥಳದಲ್ಲಿ ಕೂಡ್ರುವರು. )

ಭೀಷ್ಮ :— ಆಚಾರ್ಯರೆ ನಿಮ್ಮ ಶಿಷ್ಯರ ಪರೀಕ್ಷೆಯಾಗಲಿ.
ದ್ರೋಣ :— ( ಸಾವಕಾಶವಾಗಿ ಮೇಲೆದ್ದು ಗಂಭೀರವಾಗಿ )
ಶಿಷ್ಯರೆ ಏಳಿ ಕಲಿತನವಿ ಮೇಲೇಳಿ
ಹೆದೆಯ ಝೇಂಕರಿಸುತ್ತ ಧನುವ ಕೈಕೊಳ್ಳಿ.
ಆಗಸದಿ ತೂಗುತಿಹ ಕಾಯಿ ಇದೆ ನೋಡಿ
ಅದರ ನೆರಳನು ಕೆಳಗಿರುವ ನೀರಿನಲಿ ನೋಡಿ
ಕತ್ತರಿಸಿ ಆ ಕಾಯಿ ಬಾಣವನು ಹೂಡಿ
ಭೇದಿಸಿ ಗುರಿಯ ಹರಿ ಧ್ಯಾನ ಮಾಡಿ.

( ದುರ್ಯೋಧನನು ಆಢ್ಯತೆಯಿಂದ ಬಂದು ಗುರಿ ಹೊಡೆಯುವನು. ಗುರಿ ತಪ್ಪುತ್ತದೆ. ಮುಖ ಭಂಗಿತನಾಗಿ ಕುಳಿತುಕೊಳ್ಳುತ್ತಾನೆ. ಹೀಗೆಯೇ ಅರ್ಜುನನನ್ನೊಬ್ಬನನ್ನುಳಿದ ಎಲ್ಲ ಶಿಷ್ಯರ ಗುರಿಯೂ ತಪ್ಪುತ್ತದೆ.)

ದ್ರೋಣ:— ಏಳೆನ್ನ ಪ್ರಿಯ ಶಿಷ್ಯ, ಪಾರ್ಥ ಮೇಲೇಳು.

( ಅರ್ಜುನನು ಹಿರಿಯರಿಗೆ ವಂದಿಸಿ ನೇರವಾಗಿ ಗುರಿಯನ್ನು ಭೇದಿಸುತ್ತಾನೆ. ದ್ರೋಣಾಚಾರ್ಯರು ಎದ್ದುಬಂದು ಅರ್ಜುನನನ್ನು ಅಪ್ಪಿಕೊಳ್ಳುತ್ತಾರೆ. ಕೌರವನೂ ತಲೆದೂಗುತ್ತಾನೆ. ಒಡನೆ ಅವನ ಕ್ರೋಧ ಪ್ರಜ್ವಲಿಸುತ್ತದೆ. ಅರ್ಜುನನು ಆನಂದದಿಂದ ಕುಣಿದಾಡುವನು. ಕೌರವನು ಕರ್ಣನ ಮೋರೆ ನೋಡುವನು. ಕರ್ಣನು ಸಾವಕಾಶ ಮೇಲೆದ್ದದ್ದನ್ನು ಕಂಡು ಜನರು ಚಪ್ಪಾಳೆಯಿಕ್ಕುವರು. ಕರ್ಣನು ಬಿಲ್ಲನ್ನು ಝೇಂಕರಿಸುವನು. ಕುಂತಿಯು ನೆಟ್ಟ ನೋಟದಿಂದ ಅವನನ್ನೇ ನೋಡುತ್ತಿರುವಳು. )

ಕರ್ಣ:— ಏಕಿಂತು ಕುಣಿಯುತಿರುವೆ ನಿಲ್,
ಈನಡತೆ ವೀರನೆಂದೆನಿಸುವವನದಲ್ಲ.
ನಿನ್ನ ಸೆಣಸಲು ಕರ್ಣ ಸಿದ್ಧನಿಹನಿಲ್ಲಿ.

(ಅರ್ಜುನನು ಸಿಟ್ಟಿನಿಂದ ಕರ್ಣನೆಡೆ ನೋಡುವನು ಭೀಮ ಹಲ್ಲು ಕಡಿಯುತ್ತಾನೆ. ಕೌರವರು ಉಬ್ಬುವರು.)

ದ್ರೋಣ:— ನೀನಾರು ವೀರವರ ?

ಕರ್ಣ:— ಗುರುವೆ ಪಾರ್ಥನ ಪ್ರತಿವೀರ.

ಭೀಷ್ಮ:— ಕುಮಾರ ನಿನ್ನ ಕುಲಶೀಲವನು ಪೇಳು.

ಕರ್ಣ:— ಕುಲವನರಿತೇನು ಮಾಡುವದು ಆರ್ಯ.

ಭೀಷ್ಮ:— ಅರಸುಗುವರರು ಸರಿಸಮಾನರೊಡನೆ ಸೆಣಸುವರು.

ಕರ್ಣ:— ನಾನು ಸರಿಯಲ್ಲವೆ ? ಶೌರ್ಯ ನೆಲಸುವದು
ಹಸ್ತದಲಿ, ಕುಲದಲ್ಲಿ ಅಲ್ಲವೆಂಬುದನು
ತೋರುವದು ಈ ನನ್ನ ಬಾಣ.

ಭೀಷ್ಮ:— ಒಪ್ಪುವೆನು ಕುಮಾರ. ಆದರೆ ಇದು
ಸಮಾಜ ನಿಯಮ ನೋಡು.

ಕರ್ಣ:— ಸಮಾಜ ನಿರ್ಮಿಸಿದವರು ತಮ್ಮಂಥವರಲ್ಲವೆ.

ಭೀಷ್ಮ:— (ನಿರುತ್ತರನಾಗಿ ದ್ರೋಣನಕಡೆ ತಿರುಗಿ)
ಆಚಾರ್ಯರು ಏನೆನ್ನುವರು.

ದ್ರೋಣ:— ವೀರವರ ವೇದಗಳ ಮನ್ನಿಸು ನಿನ್ನ ನೆಲೆಯನು ತಿಳಿಸು.

ಕರ್ಣ:— ಆಚಾರ್ಯರೆ ವೇದಗಳ ಭೂತವನು ಬಿಡುವಿರಾ ?
ವೇದಗಳ ನಿಜರೂಪ ಮರೆಯಾಗಿಹುದ ಕಾಣಿರಾ ?
ಕಲಿತವರ ಕೈಗೊಂಬೆಯಾಗಿಹವು ವೇದಗಳು.
ಅಂದು ಧರ್ಮದ ಏಳ್ಗೆಗಾಗಿ ಹುಟ್ಟಿದವು ವೇದಗಳು.
ಇಂದು ಬಿತ್ತುವವು ವಿಷಮತೆಯ ಬೀಜವನು.
ಬೆಳೆಯುವದು ವಿಷಬೀಜ ಜ್ಞಾನಿ ಕಾಣುವನು.

ಬೆಳೆದು ಮರವಾಗಿ ನಿಲ್ಲುವದು ಭಾರತದಿ
ಭವಿಷ್ಯದಲಿ ಛೇದಿಸುವದು ರಾಜ್ಯಗಳ
ಕಡಿಯುವೆನು ಕಲಿತನದಿ ದುರ್ಬೀಜಗಳ.
ಮಡಿಯುವೆನು ಇದಕಾಗಿ ಭಾರತದಿ.

**ದ್ರೋಣ:—** (ತಲೆದೂಗುವ. ಭೀಮ ಮೇಲೆದ್ದದ್ದನ್ನು ಕಂಡು)
ಏಕೆ ಭೀಮ ?

**ಭೀಮ:—** ಈ ಕುನ್ನಿಗುತ್ತರಿಸುವೆನು.
(ಕರ್ಣನ ಕಡೆ ನೋಡಿ ಘರ್ಜಿಸಿ)
ನೀನಾವ ತೊತ್ತಿನ ಮಗನು ಬೊಗಳು.

(ಕುಂತಿಯು ಕಿವಿ ಮುಚ್ಚಿಕೊಳ್ಳುವಳು. ಕರ್ಣನು ಸಿಟ್ಟಿನಿಂದ)

**ಕರ್ಣ:—** ನಿನಗುತ್ತರವನೀಯುವದು ಈ ಬಾಣ.

(ಬಾಣವು ಭೀಮನ ಗದೆಯನ್ನು ತೆಗೆದುಕೊಂಡು ಆಕಾಶಕ್ಕೆ ನೆಗೆಯುವದು. ಭೀಮ ಪೆಚ್ಚಾಗಿ ನಿಲ್ಲುವನು. ಅರ್ಜುನನು ಮುಂಬರುತ್ತಿರುವಾಗ)

**ಭೀಷ್ಮ:—** ನಿಲ್ಲು ಅರ್ಜುನಾ (ಕರ್ಣನಿಗೆ) ಶಬಾಸ್ ವೀರ.
ಹೇಳಯ್ಯ ನಿನ್ನಿರುವ ತೂರ.

**ಕರ್ಣ:—** ಗಾಂಗೇಯ ಹಿರಿಯರೆಂದು ಮನ್ನಿಸಿದೆ.
ಕೇಳಿ, ಸೂತಪುತ್ರನು ನಾನು. ಕರ್ಣನೆಂಬುವರು.

**ದ್ರೋಣ:—** ನಿನ್ನ ಗುರುವಾರು ?

**ಕರ್ಣ:—** ಭಾರ್ಗವ.

**ದ್ರೋಣ:—** (ಆಶ್ಚರ್ಯದಿಂದ) ಭಾರ್ಗವನ ಶಿಷ್ಯ.
(ಸ್ವಗತ) ಅರ್ಜುನನಿಗೆ ಜಯವಿಲ್ಲ (ಪ್ರಕಾಶ)
ಮನ್ನಿಸಿದೆ ವೀರ.

**ಭೀಷ್ಮ:—** ವೀರ ಗುರುವಿನ ಶಿಷ್ಯ ವೀರನೇ ನಿಜ. ಆದರೆ....

**ಭೀಮ:—** ಸೂತಪುತ್ರ, ಕಾದಲು ಬಂದಿದೆ. ಹ ಹ. ಹ.

**ಪಾರ್ಥ:—** ಕ್ಷತ್ರಿಯರ ಸಂತತಿಯನೆ ಕಿತ್ತು, ಬ್ರಾಹ್ಮಣರಿಗೆ
ಭೂಮಿಯನು ಕೊಟ್ಟ ಪರಶುರಾಮನ ಶಿಷ್ಯ !
ಸ್ವಾರ್ಥಿಯ ಶಿಷ್ಯನಲ್ಲವೆ ನೀನು ?

**ಕರ್ಣ:—** ಜೋಕೆ ಅರ್ಜುನಾ, ಗುರುವನಿಂದಿಸುವೊಡೆ
ನಿನ್ನ ನಾಲಿಗೆಯ ಸೀಳುವೆನು. ಉಚ್ಚಕುಲದವರ
ನಡೆಯಲ್ಲವೆ ಇದು ಆಚಾರ್ಯರೆ ?

**ದ್ರೋಣ:—** (ಸ್ವಗತ) ಭಾರ್ಗವ ಧನ್ಯ. (ಪ್ರಕಾಶವಾಗಿ)
ಭಾಪು ಕರ್ಣ. ಗುರುಕೆ ಮತ್ಸರವಿಲ್ಲ.

**ಭೀಮ:—** (ಘರ್ಜಿಸಿ) ಹಂದಿಯನ್ನೇಕೆ ಮೇಲೆತ್ತುವಿರಿ.

**ಕರ್ಣ:—** ತೋರಿಸುವೆ ಹಂದಿಯ ಶೌರ್ಯ.
ಅನುಮತಿಯನೀಯು ಗಾಂಗೇಯ, ಆಚಾರ್ಯ.

**ಭೀಷ್ಮ:—** ಸೂತಪುತ್ರನ ಕೂಡ ಕಾದುವುದು ಅರಸುಗಳ
ಧರ್ಮವಲ್ಲ ಕರ್ಣಾ....................

**ಕೌರವ:—** (ನಡುವೆ) ಆರ್ಯರೆ ಹಿರಿತನ ಕುಲದಿಂದದ.
ವೀರರನು ತುಳಿಯುವುದು ನಿಮ್ಮ ದಾಸ್ಯ ಮದ.
ಕೌರವನ ರಾಜ್ಯದಲಿ ಉಚ್ಛನೀಚತ್ವಕೆಡೆಯಿಲ್ಲ.
ವೀರರನು ಆದರಿಸುವುದು ರಾಜನ ಕೆಲಸ.
ಹಿರಿಯರೇ, ಪ್ರೇಕ್ಷಕರೆ, ಕಿವಿಗೊಟ್ಟು ಕೇಳಿ.
ಮಾಡಿರುವೆ ಕರ್ಣನನು ಅಂಗರಾಧಿಪತಿಯಾಗಿ.

(ದುಃಶಾಸನು ತಂದ ಕಿರೀಟವನ್ನು ಕರ್ಣನ ತಲೆಯ ಮೇಲಿಟ್ಟು ಕರ್ಣನನ್ನಾಲಂಗಿಸಿ)

ಹೇಳುವೀರವರ ಅಂಗದಾಧಿಪತಿ ಎಂದು.

**ದ್ರೋಣ:—** ಗುಣಗ್ರಾಹಿ ಕೌರವೇಶ್ವರ

**ಕರ್ಣ:—** ಒಪ್ಪಿಗೆಯ ಹಿರಿಯರೆ, ಅನುಮತಿಯ
ನೀಡುವಿರಾ. (ನಗುತ್ತ) ಬಾ ಅರ್ಜುನಾ.

**ಭೀಷ್ಮ:—** ಕುಮಾರ, ಇದೀಗ ಶುಭ ಸಮಯ.

**ದ್ರೋಣ:**— ಅಹುದು ಭಾರತವೀರ.

( ಕುಂತಿಯು ಆನಂದದಿಂದ ಕಣ್ಣೀರೊರಿಸಿಕೊಂಡು ನೇಸರನತ ನೋಡುವಳು. )

**ಕೌರವ:**— ಬಾ ಕೆಳೆಯ ಕದನ ಸಾಕಿನ್ನು. ಇಲ್ಲಿಯೇ ಪಟ್ಟಾಭಿಷೇಕ ಮಹೋತ್ಸವ ಮಾಡೋಣ.

(ಕರ್ಣನನ್ನು ಸಿಂಹಾಸನದ ಮೇಲೆ ಕೂಡ್ರಿಸುತ್ತಾರೆ. ಭೀಮ ಅರ್ಜುನರು ಸರ್ರನೆ ಹೋಗಿ ಬಿಡುವರು. ಕೌರವನು ಅವನೆಡಗಡೆ ಕೂಡ್ರುವನು. ಉಳಿದವರು ತಮಗುಚಿತವಾದ ಆಸನಗಳಲ್ಲಿ ಕೂಡ್ರುವರು. ಪುರೋಹಿತರ ವಿಧಿಗಳು ಮುಗಿದ ನಂತರ ಕೌರವನು ಹೇಳಿದ್ದು)

**ಕೌರವ:**— ಇಂದಿನಿಂದ ಕರ್ಣನು ಅಂಗದ ದೇಶದ ಅರಸು.

**ಭೀಷ್ಮ:**— ಇವನೊಬ್ಬ ಭಾರತವೀರ.

(ಜನರು ಭಾರತವೀರನಿಗೆ ಜಯವಾಗಲಿ ಎನ್ನುತ್ತಿರುವಾಗ್ಗೆ ತೆರೆ ಬೀಳುವದು)

———

# ನಾಲ್ಕನೆಯ ನೋಟ



(ಹಸ್ತಿನಪುರದ ರಾಯಬೀದಿ. ಇಬ್ಬರು ಆ ಊರ ನಿವಾಸಿಗಳು **ಮಾತಾಡುತ್ತ ಬರುತ್ತಾರೆ.** ರಾಯಬೀದಿಯ ಕಟ್ಟ **ಕಡೆಗೆ** ಉದ್ಯಾನವೊಂದು **ಕಾಣಿಸುತ್ತದೆ.**)

**ಒಬ್ಬ**:— ಹಾಗಾದರೆ ಭಾರತಯುದ್ಧ ಕೈಗಟ್ಟುವದೆ ?

**ಇನ್ನೊಬ್ಬ**:— ಸಂಶಯವೇನು. ಸಂಧಿಯು ವ್ಯರ್ಥವಾಯಿತು.
ಕೃಷ್ಣನ ವಿಶ್ವರೂಪವನು ಸಭೆ ಕಂಡಿತು.
ಮಾಯಾವಿ ನೀನೆಂದು ಕೌರವೇಶ್ವರ ಕಿಡಿಕಾರಿದ.
ಕಲಿಕರ್ಣ ಕೌರವೇಶ್ವರನಾಣತಿಗಾಗಿ ಕಾದಿದ್ದ.

**ಒಬ್ಬ**:— ಛಲದಂಕ ಸುಯೋಧನನು ನೋಡು.
ಜೂಜಾಡಿ ಸೋತ ಪಾಂಡವರ ಪಾಡು
ಕಳೆದವು ಹದಿನಾಲ್ಕು ವರುಷಗಳು ವನದಲ್ಲಿ
ಭೀಮನೆಂತು ಸೈರಿಸುವನೋ ಸಿಟ್ಟಿನಲ್ಲಿ.

**ಇನ್ನೊಬ್ಬ**:— ಕೀಳು ಮೇಲುಗಳ ಗೀಳು ನೋಡಿ,
ಕುದಿಯುತಿಹ ಕಲಿಕರ್ಣ ಬಾಡಿ.
ದ್ರುಪದನಂದನೆ ನಿಂದಿಸಿದ ಸೂತನೆಂಬ ಮಾತು
ಕರ್ಣನೆದೆಯಲಿ ಕುದಿದು, ಬಾಣದಲಿ ಉಕ್ಕುತಿದೆ.
ಮುಂಬರುವ ಯುದ್ಧದಲಿ ಕರ್ಣನೆ ಓತು
ವಹಿಸುವನು ಆಳ್ತನದಿ ನಾಯಕತ್ವವನು.

**ಒಬ್ಬ**:— ಇನ್ನೂ ಸಂಧಿಯಾಗುವ ಸಂಭವವಿದೆ.

**ಇನ್ನೊಬ್ಬ**:— ಇನ್ನೆಲ್ಲಿಯ ಸಂಧಿ. (**ತೆರೆಯ ಕಡೆ ನೋಡಿ**)
ರಣವಾದ್ಯ ಭೋರ್ಗರೆಯುತಿವೆ. ಅದೋ

ಕೃಷ್ಣ ಕರ್ಣರಿತ್ತಲೇ ಬರುತಿಹರು. ನಡೆ
ಆ ಉದ್ಯಾನದ ತರುರಾಜಿಯಲ್ಲಿ ಮರೆಯಾಗುವಾ.
(ಹೋಗುವರು.)

(ಕೃಷ್ಣನೇ ರಥವನ್ನು ನಡಿಸುತ್ತ ಬರುತ್ತಾನೆ. ಆ ಮೇಲೆ ಕರ್ಣನನ್ನು ತನ್ನ ಹತ್ತಿರಕ್ಕೆ ಎಳೆದುಕೊಂಡು)

**ಕೃಷ್ಣ:—** ಕಡುನನ್ನಿಗಾಗರವಾದ ಕಲಿಕರ್ಣ ಬಾರಯ್ಯ.
ನಿನ್ನ ಮೈದುನನು ಕೈವಿಡಿದು ಕರೆವ ನೋಡಯ್ಯ.

(ಎಳೆದು ತನ್ನ ಹತ್ತಿರ ಕೂರ್‍ಿಸಿಕೊಳ್ಳುವನು. ಕರ್ಣನು ಭಯಭಕ್ತಿಯಿಂದ)

**ಕರ್ಣ:—** ಭಕ್ತನಿಗೆ ದೇವನೊಳು ಸಲುಗೆಯೆ ಮುರಾರಿ
ನಿಮ್ಮಡಿಯೆ ಲೇಸನೆಗೆ ಅಸುರಾರಿ.

(ಏಳುವನು. ಪುನಃ ಬಲಾತ್ಕಾರದಿಂದ ಕೃಷ್ಣ ಕೂಡ್ರಿಸುವ)

**ಕೃಷ್ಣ:—** ನಿನ್ನ ಘನವಂತಕನುಗುಣವಾಗಿ ನುಡಿದೆ.
ಕುಲವ ನಾಲಿಗೆ ಅರುಹಿತೆಂಬುದನು,
ಜಗದ ನಾಣ್ನುಡಿಯನ್ನು; ಸತ್ಯ ಮಾಡಿದೆ

**ಕರ್ಣ:—** ದಾನವಾಂತಕ ಸೂತಪುತ್ರನು ನಾನು
ಯಾದವ ಕುಲಾಗ್ರೇಸರನು ನೀನು.
ಅರಣ್ಯದ ಅರಸನು ಅಸುರಾರಿ
ಬಡ ನರಿಯು ಸೂತಪುತ್ರ.
ವಂಶವಿಹೀನನು ಸರಿಸಮಾನಿಸಿವೊಡೆ
ವೇದಗಳು ಹುಸಿಯಾಗದಿರುವವೆ ಹರೀ.

**ಕೃಷ್ಣ:—** ನೋಯದಿರು ಕರ್ಣ ಅವೆಲ್ಲ ಸಟೆಮಾತು
ಹೊಟ್ಟೆಗಾಗಿ ವೇದಗಳ ಬಲಿಗೊಡುವವರ ಮಾತು.
ವಂಶವಿಹೀನ ನೀನಲ್ಲ, ಭಾನುವಂಶ ಲಲಾಮ
ನರಿಗಳೊಡನಾಡುತ್ತ ನರನಾಯಕನೆಂಬುದನು ಮರೆತೆ.
ಯಾದವರು ಕೌರವರು, ಪಾಂಡವರೊಳು ಭೇದವಿಲ್ಲ.
ಕೇಳ್ ಕರ್ಣ ನೀನಿರಲು ಕದನಕ್ಕೆ ಕಾರಣವಿಲ್ಲ.
ಮೊದಲಪಾಂಡುವ ನೀನು ಯಮನಂದನ ನಿನ್ನನುಜ.

ದೇವಿಕುಂತಿಯು ಪಡೆದೈದುವರಗಳಲಿ ಮೊದಲಿನ
ವರವೆ ನಿನ್ನ ಜನನ. ಕನ್ಯೆತನದಲಿ ನಿನ್ನ
ಹೆತ್ತುದಕೆ ನೆರೆನಾಚಿ, ಇಳೆಯ ಅಪವಾದಕಂಜಿ,
ದೇವರನೆ ನಂಬಿ, ಗಂಗೆಯಲಿ ಬಿಟ್ಟಳು.
ಸೂತ ಸಲಹಿದನು ಮುಂದೆ.

**ಕರ್ಣ:—** ಹೇಳದಿರು ಕೃಷ್ಣಾ ಕೇಳಲಾರೆನು ಮುಂದೆ.

**ಕೃಷ್ಣ:—** ರವಿಸುತನೆ ನೋಯದಿರು, ಭುವಿಯ ಬಾಳು
ಬಚ್ಚಿಡಲಾರದ ಒಗಟು, ನೋಡುವದೆ ಬರಿ ಹಾಳು.
ಬಾ ಕರ್ಣ ಪಾಂಡವರ ಸೇರು, ಸಿಂಹಾಸನವನೇರು,
ಹಸ್ತಿನಪುರದ ರಾಯಗದ್ದುಗೆಯನೇರು, ಪಾಂಡವರು
ಕೌರವರು, ಯಾದವರು, ನಿನ್ನನೋಲೈಸುವರು.
ಮಹರಾಜ,-ಅಣತಿಯನೀಯೆಂದು ಕೇಳುವರು.
ಈ ಐಸಿರಿಯ ತೊರೆದು ಕೌರುವಗೆ ಆಳಾಗಿ,
ಸುಯೋಧನನ ಬಾಯ್ದಂಬುಲಕಾಗಿ,
ಜೀಯ ಪಸಾದವೆನ್ನುವರೆ ಹೇಳು.

**ಕರ್ಣ:—** ಸಾಕು ನಾಕಿನ್ನು ಕೃಷ್ಣಾ.

**ಕೃಷ್ಣ:—** ಕರ್ಣ ಬೇಸರಕಾವ ಕಾರಣವಿಹುದು ?
ಪಾಂಡುತನಯರೆ ನಿನ್ನ ತಮ್ಮಂದಿರು
ಕುಲವ ಕೇಳುವಡೆ ಸೂರಿಯನ ಸುತ ನೀನು.
ಬಾಕರ್ಣ ಐವರನು ನಿನ್ನ ಪದಕೆ ಕೆಡಹುವೆನು.
ಇಂತೇಕೆ ಕಲ್ಲಾಗಿ ನಿಂತಿರುವೆ. ಒಪ್ಪಿಗೆಯೆ ?

**ಕರ್ಣ:—** (ಸಂಕಟದಿಂದ) ಬೂದಿಮುಚ್ಚಿದ ಕೆಂಡವಯ್ಯ ನೀನು.
ನನ್ನ ಜನುಮವನರುಹಿ ಘಾತಿಸಿದೆ ಏನು ?
ಮರುಳು ಮಾಧವ ರಾಜ್ಯದ ಸಿರಿಗೆ ಸೋಲುವನೆ?
ಕರ್ಣ ವಂಶವಿಹೀನನೆಂದು ಸಾಯುವನೆ ?

**ಕೃಷ್ಣ:—** ಹಾಗೆನ್ನದಿರು ಕರ್ಣ ಪಜ್ವಳಿಪ ಭವಿಷ್ಯದತ್ತ
ರಾಜಕಾರಣಿಯು ನೋಡುವನು.

**ಕರ್ಣ**:— ಭಾರತಯುದ್ಧದ ಚರಮಗೀತೆಯನೆ ನುಡಿಸಿದೆ.
ಅರಿಗಳ ರುಂಡವನು ಪೊರೆದವಗೆ ಕಾಣಿಕೆ
ಎಂದು ತರಿದೊಪ್ಪಿಸುವ ಕನಸ ಕಂಡೆ.
ಆದರೆ ಕನಸು ನುಚ್ಚುನೂರಾಗಿ ನೀನು ಮಾಡಿದೆ.
ಕೌರುವನ ಕೊಲೆಮಾಡಿದೆ ಕೃಷ್ಣಾ.

**ಕೃಷ್ಣ**:— (ನಿರುತ್ತರನಾಗಿ) ಧರ್ಮವನೆ ಹೇಳಿದೆ ಕರ್ಣ.

**ಕರ್ಣ**:— ಈ ಮೇಲುಕೀಳೆಂಬ ಧರ್ಮಗಳ ಕಲಹ ಸಾಕಿನ್ನು.
ಕೃಷ್ಣಾ ಕೌರುವೇಶ್ವರನೆನ್ನ ಜೀವ, ಪನ್ನಗಚಿನ್ಹನೆನ್ನ
ಪರಿವಾರ, ಅವನ ವೈರಿಯೆ ನನ್ನ ವೈರಿ.
ಕರ್ಣನ ಸ್ವಾಮಿಭಕ್ತಿಯನು ಕಾಣುವಿ ಶೌರಿ.
ಸೇವೆಯೊಳೆ ಸಗ್ಗವಿದೆಯೆಂಬದನು ತೋರುವೆ.
ಉಚ್ಚನೀಚತತ್ವಗಳ ಕಲಹ ಕಡೆಗಾಣಿಸುವೆ.

**ಕೃಷ್ಣ**:— ನಿನ್ನ ತತ್ವವನು ಮುಂದಿನ ಜಗವರಿವುದು.
ಆದರೆ ಕರ್ಣ ಪಾಂಡವರ ನೆರೆನೋಡು.

**ಕರ್ಣ**:— ಬೆದರದಿರು ಕೃಷ್ಣ ಪಾಂಡವರು ನಿನ್ನ ದೇಹ.
ದೇವನನು ನೋಹಿಸೆನು ಬಿಡು ಇನ್ನ ಮೋಹ,
ಮಾರಿಗೌತಣವ ಮಾಡುವೆನು ನಾಳೆ,
ನಿನ್ನೈವರನು ನೇಸರಿನಾಣೆ ನೋಯಿಸೆನು.
ಕೌರುವೇಶ್ವರನಿಗಾಗಿ ಕಾದಿ ಮಡಿಯುವೆನು.
ಉಪ್ಪುಣುಸಿ ಬೆಳಸಿದ ಋಣ ತೀರಿಸುವೆನು.

**ಕೃಷ್ಣ**:— ಧೃಡತೆಯೇ ಮೂರ್ತಿವೆತ್ತಿರುವದನು ಕಂಡೆ.
ಅರಿಭಯಂಕರ ಭಾರತವೀರ ಕರ್ಣನನು ಕಂಡೆ.
ಧನ್ಯಧನ್ಯ ಕರ್ಣ ನೀನೇ ಧನ್ಯ. ನಿನ್ನಂಥ
ಸ್ವಾಮಿಭಕ್ತ ವೀರರಿನ್ನುಂಟೆ ಭಾರತದಿ
ಸುಯೋಧನ ನಿನ್ನ ಮಾತ ಮೀರನು ಕರ್ಣ
ಪ್ರಯತ್ನಮಾಡು ಸಂಧಿಗಾಗಿ.

**ಕರ್ಣ:—** ಬೆಂಕಿಯನು ಹೊತ್ತಿಸಿ ಹೊರಟಿರುವಿ ನೋಡು.
ಪಡುವಣ ಕಡಲನಿಳಿಯುತಿರುವ ಸಂಜೆಗೆಂಪು,
ಕಾಳಗದ ಮುಂಬೆಳಕೆಂದು ತೋರುವದು ನೋಡು.
ಹಬ್ಬುತಿದೆ ಸಂಜೆಯೊಳು ರುದ್ರ ಕೆಂಪು.
ಗೀತೆಯನು ಹಾಡುವ ಅಮರ ಕವಿನೀನು
ನುಡಿಸುತಿರುವೆ ರುದ್ರ ವೀಣೆಯನು.
ತೆರೆಯ ಮರೆಯಲಿ ನಾಟಕವ ನಡಿಸಿರುವಿ ಏನು ?
ಪಾಂಡವರಿಗಾಗಿ ತಪಿಸುತಿರುವಿಯಾ ನೀನು.

**ಕೃಷ್ಣ:—** (ತಲೆದೂಗಿ) ನಾನಿನ್ನು ಬರುವೆ.
ಹೆತ್ತಕುಂತಿಯು ಬಂದರವಳನಾದರಿಸು.
ನನಗನುಮತಿಯನೀಡು.

(ಕೃಷ್ಣನು ಕರ್ಣನನ್ನು ಅಪ್ಪಿಕೊಂಡು, ಆನಂತರ ಅಲ್ಲಿಯಬಿಟ್ಟು ರಥವನ್ನೋಡಿಸುತ್ತಾನೆ. ಕರ್ಣನು ರಂಗದ ಒಂದು ಬದಿಗೆ ಕಣ್ಣುಮುಚ್ಚಿ ಏನನ್ನೋ ಧ್ಯಾನಿಸುತ್ತಿರುವಾಗ ಇನ್ನೊಂದು ಬದಿಯಿಂದ ಲಗುಬಗೆಯಿಂದ ಕೌರುವನು ಬರುತ್ತಾನೆ.)

**ಕೌರುವ:—** (ಸ್ವಗತ) ಕೆಳೆಯ ಕರ್ಣನನ್ನು ಕೃಷ್ಣಕೊಂಡೊಯ್ದನೆ ?
ಕಪಟನಾಟಕಿ ಎಂಬ ಬಿರುದ ಸಾರ್ಥಕಮಾಡಿಕೊಂಡನೆ.
ಇನಿತುದಿನ ಕರ್ಣನ ನೆರವಿನಿಂದ ನಾನೆನಿತು
ಭವ್ಯ ಸ್ವಪ್ನಗಳ ಕಾಣುತಲಿದ್ದೆ. ಭಾರತ
ಯುದ್ಧದಲಿ ಜಯಲಕ್ಷ್ಮಿ ನನ್ನ ಕೊರಳಿಗೆ
ಹೂಮಾಲೆ ಸೂಡಿದುದಾದರೆ, ಕೆಳೆಯ ಕರ್ಣನಿಗೆ
ನನ್ನಣ್ಣನೆಂಬುದನರುಹಿ, ಅವನ ತಲೆಯ ಮೇಲೆ
ಈ ಮಣಿಮುಕುಟವನ್ನಿಟ್ಟು ಧನ್ಯನಾಗಲೆಂದಿದ್ದೆ.
(ಸ್ವಲ್ಪಹೊತ್ತು ಚಿಂತಿಸಿ)
ಕಪಟನಾಟಕಿ ಎಲ್ಲವನ್ನು ತಿಳಿಸಿರ್ದೊಡೆ,
ಕಡುಗಲಿ ಕರ್ಣ ಕಾಳಗಕೆ ಸಮ್ಮತಿಸುವನೇ ?
(ಮತ್ತೆ ವಿಚಾರಿಸಿ)

ಕೆಳೆತನದ ಕಾವಿನಿತರೊಳು ತಣ್ಣಾಗುವದೇ ?
ಛಲವೆ ತನ್ನೈಸಿರಿ ಎಂದು ನಂಬಿದ ನನ್ನ
ಮನಬಯಕೆ ಮಣ್ಣಾಗುವದೆ.

**ಕರ್ಣ:—** (ಕಣ್ಣು ತೆರೆದು)
ಅದ್ಭುತದ-ಮೇಲದ್ಭುತವನೆ ಕಾಣುತಿರುವೆ.
ನೋಡಿದತ್ತೆಲ್ಲ ಕೌರುವನನೆ ಕಾಣುತಿರುವೆ.
(ಆವೇಶದಿಂದ) ಬೆದರದಿರು ಕರ್ಣನಿರುವನಕ ಗೆಳೆಯಾ,
ಪಾಂಡವರ ಸೈನ್ಯವನು ಯಮಪುರಕೆ ಅಟ್ಟುವೆನು.
ಅಥಿರಥ ಮಹಾರಥರನುರುಳಿಸಿ ಕಾದುವೆನು.
ಜಗದ ಭಾರವನು ಕಾಳಗದಿ ಇಳಿಸುವೆನು.

**ಕೌರುವ:—** (ಆನಂದದಿಂದ) ಕರ್ಣಾ................

**ಕರ್ಣ:—** ಕೌರುವೇಶ್ವರಾ,........................

(ಇಬ್ಬರೂ ಭರದಿಂದ ಮುಂಬರಿದು ಒಬ್ಬರನ್ನೊಬ್ಬರು ಅಪ್ಪಿಕೊಳ್ಳುತ್ತಾರೆ)

ಪನ್ನಗಚಿನ್ಹ ಪರಿವಾರವನ್ನುಳಿದು
ಪಾದಚಾರಿಯಾಗಿ ಬಂದ ಕಾರಣವನರಿಯ ಬಹುದೆ ?

**ಕೌರುವ:—** ಕೆಳೆಯ ಕರ್ಣನನೆ ಕಾಣಲು ಬಂದೆ.
ಕಾಳಗವು ಕೈಗಟ್ಟುತಿದೆ ನೋಡು.

**ಕರ್ಣ:—** ಕೌರುವೇಶ್ವರನಾಣತಿಗಾಗಿ ಕಾಯುವೆನು.

**ಕೌರುವ:—** ಹಾಗೆನ್ನದಿರು ಕೆಳೆಯಾ. ಕೌರುವ ಕರ್ಣರಲಿ
ಭೇದವಿದ್ದೊಡೆ ಉಚ್ಚನೀಚತ್ವಕೆಡೆಯುಂಟು.
ದೇಹವೆರಡು ಜೀವ ಒಂದೆಂಬುದನರಿಯೆಯಾ ಕರ್ಣಾ.

**ಕರ್ಣ:—** (ಸಂತೋಷದಿಂದ ಕೌರುವನ ಕೈಹಿಡಿದು)
ದೇಹವನೆ ಸವಿಸುವೆನು ನಿನಗಾಗಿ ಸುಯೋಧನ.

**ಕೌರುವ:**— ಸೇನಾಪತಿಯು ಮೊದಲ ಪಟ್ಟವಾರಿಗೆ.

**ಕರ್ಣ:**— ಕೌರುವೇಶ್ವರನ ಇಚ್ಛೆ.

**ಕೌರುವ:**— ನಿನ್ನ ಸಲಹೆ ಬೇಕು ಕರ್ಣಾ.

**ಕರ್ಣ:**— ಮೊದಲು ಇದಕೆ ಕಲಿಭೀಷ್ಮರೆ ಯೋಗ್ಯರು.
ಆನಂತರ ಗುರುವರ್ಯ ದ್ರೋಣಾಚಾರ್ಯರು.

**ಕೌರುವ:**— ಹಾಗಾದರೆ ಮುತ್ತಜ್ಜನಿಗಿಂದೇ ಪಟ್ಟವನು ಕಟ್ಟಿ
ಕಾಳಗದ ಕಣಕಿಳಿಯೋಣ.

**ಕರ್ಣ:**— ಛಲದಂಕ ಸುಯೋಧನನೆಂದು ಜಗದಿ ಸಾರೋಣ.

**ಕೌರುವ:**— ತ್ಯಾಗದಲಿ ಕಲಿಕರ್ಣ, ಭಾರತವೀರನೆಂದು
ಸಾರೋಣ. (ಹೋಗುವರು.)

—: ತೆರೆ ಸರಿಯುವದು :—

# ಐದನೆಯ ನೋಟ



(ಶಯನಗೃಹದಲ್ಲಿ ಕರ್ಣನು ಅತ್ತಿಂದ ಇತ್ತ ತಿರುಗಾಡುತ್ತಿರುವನು.)

**ಕರ್ಣ:—** ಸರಿರಾತ್ರಿ ಸರಿದರೂ ಬರಿಗೊತ್ತಿ ಸಿಪ್ರೆಯನು,
ಇಂದಿನಾಘಟನೆಗಳು ನಿಲ್ಲುತಿವೆ ಮನದೆದುರು.
ಕಲಕುತಿವೆ ನನ್ನ ಅಂತಃಕರಣವನು.
ಕೌರುವನಿಗಾಗಿ ಎದೆವೀಣೆ ಮಿಡಿಯುತಿದೆ.
ವೈರಿಗಳನಳಿಸಿ ಕೌರುವನ ಋಣತೀರಿಸಲೆಂದಿದ್ದೆ.
ಆದರೆ ....... (ಸಂಕಟದಿಂದ)
ಸುಯೋಧನನನ್ನು ರಕ್ತಮಡುವಿನಲಿ ಕೈಬಿಟ್ಟು
ಕಣ್ಮರೆಯಾಗಬೇಕಾಯಿತೆ ? ..........
(ಅಷ್ಟರಲ್ಲಿ ಗೋಡೆಯಮೇಲೆ ನೆರಳುಬಿದ್ದದ್ದನ್ನು ಕಂಡು)
ಯಾರದೀ ನೆರಳು. (ವಿಚಾರಿಸಿ) ಯಾಚಕರಿರಬಹುದು!
(ತಿರುಗಿ ನೋಡಿ ಆಶ್ಚರ್ಯದಿಂದ) ಸ್ತ್ರೀ ಎಂದು
ತೋರುತಿದೆ. (ವಿಚಾರಿಸಿ)
ಪೆಣ್ಣಾದೊಡೇನಂತೆ, ಎನ್ನರಸಿಯನ್ನುಳಿದವರು
ತಾಯಂದಿರಲ್ಲವೆ ನನಗೆ. ಒಳಗೆ ಬಾ ತಾಯಿ.
(ಕುಂತಿಯು ಅವಗುಂಠನವತಿಯಾಗಿ ಒಳಗೆ ಪ್ರವೇಶಿಸುವಳು)
ಬಂದುದೇತಕೆ ತಾಯಿ.

**ಕುಂತಿ:—** ಪುತ್ರ ಭಿಕ್ಷೆಗಾಗಿ.

**ಕರ್ಣ:—** ನಿಮ್ಮ ಮಗನಾರು ತಾಯಿ ?

**ಕುಂತಿ:—** ನೀನು ಕುಮಾರ. (ಮುಸುಕನ್ನು ತೆರೆಯುವಳು)

**ಕರ್ಣ**:— (ಆಶ್ಚರ್ಯದಿಂದ) ಯಾರು ? ಕುಂತೀದೇವಿ.
ಪಂಚಪಾಂಡವರ ಜನನಿ. (ನಮಸ್ಕರಿಸುವನು)

**ಕುಂತಿ**:— ಅಹುದು. ಅರಸನೆಯ ಮಗನ ಭಿಕ್ಷೆಗಾಗಿ ಇದೀಗ
ಬಂದಿರುವೆ.

**ಕರ್ಣ**:— ತ್ರಿಲೋಕವೀರ ಪಾರ್ಥನ ತಾಯಿಯೂ ಭಿಕ್ಷೆ
ಬೇಡಬೇಕಾಯಿತೆ ? ಅದೂ ಸೂತ ಸುತನ **ಬಳಿಯಲ್ಲಿ**.

**ಕುಂತಿ**: — ಸೂತಸುತನಲ್ಲ ....... .......

**ಕರ್ಣ**:— ಬೇಡ ತಾಯಿ ಎಲ್ಲವನು ತಿಳಿದಿರುವೆ.

**ಕುಂತಿ**: — ಹಾಗಿರ್ದೊಡೆ ತಾಯಕರುಳನರಿಯಲಾರಿಯಾ ?

**ಕರ್ಣ**:— ಅಂದು ಗಂಗೆಯಲಿನ್ನ ಬಿಡುವಾಗ ನಿನ್ನ
ಕರುಳರಿಯಲಿಲ್ಲವೆ. ಸೂತಪುತ್ರನು ನೀನೆಂದು ಭೀಮ
ನಿಂದಿಸುವಾಗ ತಾಯ್ಗರುಳು ಮಲಗಿತ್ತೆ ಹೇಳಮ್ಮ.
ತುಂಬಿದಾ ಸಭೆಯಲ್ಲಿ ನೀಂ ಕುಳಿತು
ಕೇಳಿದಾ ವೇಳೆಯಲಿ, ಮುಂಬರಿದು
ನನ್ನಮಗನಿವನೆಂದು ನುಡಿಯಲಿಲ್ಲವೇಕೆ ?
ಜಗದ ಭಯವಿನಿತು ಬಲವಂತವಾಗಿರ್ದೊಡೆ
ಅದು ಕರುಳಲ್ಲ; ಕರಗಸವು ತಾಯಿ.

**ಕುಂತಿ**:— (**ಕಿವಿಮುಚ್ಚಿಕೊಂಡು**) ಬೇಡ **ಕರ್ಣಾ** ಕೇಳಲಾರೆ
ಕಿವಿಯೊಡಿವ ಮಾತುಗಳ. ಹೆಣ್ಣಬಾಳನರಿಯದಲೆ.
ಏಕಿನಿತು ಇರಿಯುತಿರುವೆ ಮಗೂ.

**ಕರ್ಣ**:— (ನಿಟ್ಟುಸಿರುಬಿಟ್ಟು) ಭೇದದೊಳು ಹೊಕ್ಕಿರಿದೆ ಅಸುರಾಂತಕಾ!
ಹೇಳಮ್ಮ ಕೌರುವರಾಯನೂ ನಿನ್ನ ಮಗನಲ್ಲವೆ ?
ನಿನ್ನಮಗ ಕರ್ಣ ಕೈಮುಗಿದು ಕೇಳುವನು,
ನಿನ್ನ ಮನಬಯಕೆಯನು ಹೇಳುತಾಯಿ.

**ಕುಂತಿ:—** (ಕರ್ಣನ ಕೈಹಿಡಿದು) ಮಗುವೆ ತಮ್ಮಂದಿರಲ್ಲಿ
ಆಗ್ರಹವೆ ? ಕರುಳಲ್ಲಿ ಕತ್ತರಿಯ ನಿಡುವಿಯಾ ?
ಬಾ ಬೇಡ. ಮನೆಗೆ ಹೋಗೋಣ.

**ಕರ್ಣ:—** ವೀರಮಡದಿಗೊಪ್ಪುವ ಮಾತೆ ಇದು,
ಹರಸಿ ಕಳುಹಿಸುತಾಯಿ. ಮಡಿಯುವನು
ನಿನ್ನ ಮಗ ನಾಳಿನ ಸಮರಾಂಗಣದಿ.

**ಕುಂತಿ:—** ಹಾಗಾದರೆ ಅಣ್ಣತಮ್ಮಂದಿರ ಕದನವನ್ನು ಕಾಣಲಿಕ್ಕೆ
ಈ ನಿರ್ಭಾಗ್ಯತಾಯಿ ಬದುಕಿರಬೇಕೆ ?

**ಕರ್ಣ:—** ಹೆತ್ತವಳಿಗೆ ಹೊರೆಯಾಗಿ, ಗುರುವಿಗೆ ಬೇಡಾಗಿ,
ಭೂಮಿಂಯು ಸುತ್ತುತಿರುವಾಗ, ಮತ್ತೆ ಆದರಿಸಿ
ಕೆಳೆಯನೆಂದು ಮನ್ನಿಸಿ ಕರೆದ ಕೌರುವಗೆ
ಮೋಸಮಾಡಲಿ ಹೇಳು ತಾಯಿ ?
ವೀರಕುಂತಿಯ ಮಗನೆಂದೆನಿಸಿ, ರವಿಂಯ
ಪಿತನೆನಿಸಿ ಘನತೆಯನು ಪಡೆದ ಕರ್ಣ,
ಸ್ವಾಮಿ ಘಾತಕನೆಂದು ಜಗ ನಗದೆ ಮುಂದೆ ?
ಇದು ನಿನ್ನ ಘನತೆಗೆ ಕೇಡಲ್ಲವೆ ತಾಯೀ ?

**ಕುಂತಿ:—** (ನಿರೂಪಾಯಳಾಗಿ) ನಿನ್ನಿಷ್ಟ ಮಗೂ. ಹೊರಡಲೆ ನಾನು.

**ಕರ್ಣ:—** ಕರ್ಣನ ಬಾಗಿಲಿಗೆ ಬಂದವರು, ಮರುಳಲಾರರು
ಬರಿಗೈಯಿಂದ. ಕರ್ಣನ ಕೊನೆಯುಗಳಿಗೆಯಲ್ಲೀಗ
ತಾಯಿಗಾವ ನೆರವುಬೇಕು ಹೇಳಮ್ಮ.

**ಕುಂತಿ:—** ತೊಟ್ಟಬಾಣವನು ಮತ್ತೆ ತೊಡದಿರು ಮಗೂ.

**ಕರ್ಣ:—** ಆಗಲಮ್ಮಾ. (ನಮಸ್ಕರಿಸುತ್ತಾನೆ)

**ಕುಂತಿ:—** (ದುಃಖದಿಂದ ಕಣ್ಣೀರು ಸುರಿಸುತ್ತ)
ಏನೆಂದು ಆಶೀರ್ವದಿಸಲಿ ಮಗೂ.

(ಕುಂತಿಯು ಹೋಗುವಳು. ಕರ್ಣನು ಸ್ವಲ್ಪಹೊತ್ತು ಅತ್ತಿತ್ತ ತಿರುಗಾಡಿ ನಿಟ್ಟುಸಿರೊಂದನ್ನು ಬಿಡುವನು.)

—: ತೆರೆ ಸರಿಯುವದು :—

# ಆರನೆಯ ನೋಟ



(ಸ್ಥಳ:— ಕುರುಕ್ಷೇತ್ರ. ಒಂದೆಡೆ ಪಾಂಡವರ ಸೇನೆ. ಮತ್ತೊಂದೆಡೆ ಕೌರವರ ಸೈನ್ಯ. ಸುತ್ತಲೆಲ್ಲ ಹೆಣಗಳು ತುಂಬಿವೆ. ಭೀಮನು ಸೀಳಿದ ದುಃಶಾಸನನ ಶವವಿನ್ನೂ ರಕ್ತರಂಜಿತವಾಗಿ ಅಲ್ಲಿಯೇ ಬಿದ್ದಿದೆ. ಅರ್ಜುನನ ರಥವನ್ನು ನಡಿಸುತ್ತ ಕೃಷ್ಣನು ಬರುತ್ತಾನೆ.)

**ಕೃಷ್ಣ:—** ಕಣ್ಗಾಣದಲಿ ಪ್ರತಿಜ್ಞೆಯನೆ ಮಾಡಿದೆ ಪಾರ್ಥ.

**ಪಾರ್ಥ:—** ಮುರಾರಿ ಯಮನಂದನನ ಮಾತು ಉರಿಸುತಿದೆ
ಎನ್ನೆದೆಯ. ಕರ್ಣನನ್ನುಳಿದವರು ವೀರರಲ್ಲವಂತೆ ಅಹುದೆ?

**ಕೃಷ್ಣ:—** ಭೀತಿಮುತ್ತಿದೆ ಅರ್ಜುನಾ ಧರ್ಮಜನನ್ನು.
ಕರುಣೆಯಲಿ ಕೈಕಾಯ್ದ ಕರ್ಣ ನಿನ್ನಣ್ಣನನ್ನು.
ಕರ್ಣ ಮುನಿದು ಕಾದಿರ್ದೊಡೆ ಕೇಳರ್ಜುನ,
ನಿನ್ನ ಧರ್ಮಜನ ಸಾವಿನೊಡನೆ ಕಾಳಗದ
ಚರಮಗೀತೆಯನೆ ನುಡಿಸಬೇಕಾಗಿತ್ತು.

**ಅರ್ಜುನ:—** ಸಾಕು ಕೃಷ್ಣಾ. ಕೇಳಲಾರೆ ಬರಲಿ ಕಲಿಕರ್ಣ,
ನೋಡುವಿಯಂತೆ ಗುಣಾರ್ಣವನ ಶೌರ್ಯ.

(ಕರ್ಣನ ಸಾರಥಿ ಶಲ್ಯನು ಮುಗುಳುನಗೆ ನಗುತ್ತ ಕರ್ಣನ ರಥವನ್ನು ಅರ್ಜುನನ ರಥಕ್ಕೆದುರಾಗಿ ನಿಲ್ಲಿಸುತ್ತಾನೆ.)

**ಕೃಷ್ಣ:—** ಅದೋ ಅರ್ಜುನಾ ಕಲಿಕರ್ಣ.

(ಕರ್ಣನು ದುಃಶಾಸನನ ಶವದತ್ತ ನೋಡಿ ಕೆಲಹೊತ್ತು ಸುಮ್ಮನೆ ನಿಲ್ಲುವನು.)

**ಅರ್ಜುನ:**— ಕಡುಗಲಿತನಕಾಗರವಾದ ಕಲಿಕರ್ಣ
ನನ್ನ ಹೆಸರ್ಗೇಳಿದೊಡೆ ಸೈರಿಸದಿರ್ದಪ್ಪೆನೀನು,
ನಾನಿನ್ನೆದುರು ನಿಂತಿರಲು ಏಕಿಂತು
ಮೌನದಲಿ ನಿಂತು "ಸೆಟ್ಟೆಯ ಬಳ್ಳಂ ಕಿರಿದುಂ"
ಎಂಬ ನುಡಿಯಂ ಸತ್ಯವನೆ ಮಾಡಿದೆ.
ಕಾಳಗದ ಕಣಕಂಜಿ ಬಾಳುವರೆ ಕಲಿಗಳು ಕರ್ಣಾ?

**ಕರ್ಣ:**— ಎಲೊ ಅರ್ಜುನಾ ಅರಸನನುಜನ ಸತ್ತ್ವಳನ್ನು
ನಿನ್ನ ಕರಳಂ ಕಿತ್ತು ತೆಗೆಯಲೆಂದಿದ್ದೆ.
ಹಾಗೆ ಮಾಡುವಡೆ ಕೇಳ್ ಪಾರ್ಥ,
ಮೂಡಣದ ರವಿ ಪಡುವಣದಿ ಮೂಡುವನು.
ಕಡಲು ಬತ್ತುವದು. ಧರೆ ಬಿರಿಯುವದು.
ಧರೆಯ ಸಿರಿಗಾಶಿಸುವನಲ್ಲ ಕಲಿಕರ್ಣ.
ಜಸವೊಂದೆ ಜಗವಿ ಸ್ಥಿರವೆಂದು ನಂಬಿಹನು.
ಹುಟ್ಟಿದವಗೊಮ್ಮೆ ಮರಣತಪ್ಪದೆಂಬುದನು
ತಿಳಿದಿರುವ. ಹುರುಡಿಸುವದು ವೀರತೆಯ
ಲಕ್ಷಣವಲ್ಲವೆಂಬುದನು ಹೇಳಲಿಲ್ಲವೆ ಹರಿಯು.

(ಅರ್ಜುನನು ಸುಮ್ಮನಿದ್ದದ್ದನ್ನು ಕಂಡು)

**ಕೃಷ್ಣ:**— (ಸ್ವಗತ) ಕರ್ಣನ ಈ ಮಾತು ಎರಡನೆಯ ಗೀತೆ.
ಆದರೆ ಅರ್ಜುನನಿಗೆ ಬಂಧು ಪ್ರೀತಿ ಬರುವಂತೆ
ತೋರುತಿದೆ. ಅದನಲ್ಲೆ ಕಡಿಯುವೆನು.
(ಪ್ರಕಾಶ) ಗುಣಾರ್ಣವನ ಶೌರ್ಯವೆಲ್ಲಿ?
ಪಾರ್ಥ ಬಿಡು ಬಾಣ.

**ಅರ್ಜುನ:**— (ಕರ್ಣನಕಡೆ ತಲೆವಾಗಿ) ವೀರ ಕರ್ಣನಿಗೆ
ಸುಸ್ವಾಗತವನೀಯುವದು ಈ ನನ್ನ ಸರಳು.
ಜಯ ಗೋವಿಂದ. (ಬಾಣಬಿಡುವ)

**ಕರ್ಣ:**— ನಿನ್ನ ಸ್ವಾಗತಕಾಗಿ ಸಿದ್ಧವಿದೆ ಈ ನನ್ನ ಬಾಣ.

(ಇಬ್ಬರೂ ಭಯಂಕರ ಬಾಣ ಬಿಡುವರು. ಕಾಳಗದ ಕಣವು ಬಾಣದಿಂದ ತುಂಬಿ ಹೋಗುವದು.)

**ಶಲ್ಯ**:— ಕರ್ಣ ಈ ಸರಳುಗಳಿಂದೇನು ಪ್ರಯೋಜನ
ದಿವ್ಯಾಸ್ತ್ರಗಳ ಕೈಕೊಂಡು ವೈರಿಯನು
ಯಮಪುರಿಗೆ ಅಟ್ಟು.

**ಕರ್ಣ**:— ಹೂಂ ....... .......

(ಬತ್ತಳಿಕೆಯಿಂದ ಬಾಣವನ್ನೊಂದು ತೆಗೆದು ಬೀಸಿ ಹೂಡುವನು. ಕೂಡಲೇ ಭೂಮಿ ನಡುಗುತ್ತದೆ. ಬಿರುಗಾಳಿ ಬೀಸುತ್ತದೆ. ಒಮ್ಮೆಲೇ ಮೋಡ ಕವಿಯ-ಲಾರಂಭಿಸುವವು.)

**ಶಲ್ಯ**:— ಧರೆನಡುಗುತಿದೆ ಕೇಡು, ಕೇಡು. (ಹಿಂತಿರುಗಿ)
ಓ, ಎದೆಗೆ ಗುರಿಯಿಡು ವರಿಸುವಳು ಜಯಶ್ರೀ.
ಸುಯೋಧನನ ನಂಬುವಳು ರಾಜಶ್ರೀ.

**ಕರ್ಣ**:— (ಸ್ವಗತ) ಹಾಗೆ ಮಾಡುವದೆ ಕರ್ಣನಿಗೆ ಕಲಂಕ.
ತಾಯಿಗಿತ್ತ ಮಾತು ನೀರಿನಲ್ಲಿ ಬರೆದಕ್ಷರ.
ಕರ್ಣನೊಳು ಮೋಸಕೆಡೆಯಿಲ್ಲ. (ಪ್ರಕಾಶ)
ತೊಟ್ಟಂಬು ಬದಲಿಸಿದ ಕರ್ಣನಿವನೆಂದು
ಜಗನಗದೆ ಹೇಳು ಶಲ್ಯ. (ಕಿವಿಯವರೆಗೆ ಜಗ್ಗಿ ಬಾಣವನ್ನು ಬಿಡುತ್ತಾನೆ. ಸ್ವಲ್ಪಹೊತ್ತು ಕತ್ತಲೆ ಮುಸುಕುತ್ತದೆ. ಪಾಂಡವರ ಸೇನೆಯಲ್ಲಿ "ಅಯ್ಯೋ ಪಾರ್ಥನ ಕೊರಳು ಹಾರಿತು" ಎಂಬ ಚೀತ್ಕಾರ ಕೇಳಬರುತ್ತದೆ. ಬೆಳಕಾದನಂತರ ಅರ್ಜುನನ ರಥವು ಸಾವಕಾಶ ಮೇಲೇರುತ್ತದೆ. ಅರ್ಜುನನ ಕಿರೀಟವು ಆಕಾಶದಿಂದ ಕೆಳಗೆ ಬೀಳುತ್ತದೆ.)

**ಅರ್ಜುನ**:— ಇದೇನು ಮುರಾರಿ.

**ಕೃಷ್ಣ**:— ಇದುವೆ ಸರ್ಪಾಸ್ತ್ರ. ಖಾಂಡವವನದ ಅಶ್ವಸೇನ.
ಸೇಡಿಗಾಗಿ ಕಾಯ್ದು ಕುಳಿತಿತ್ತು ಕರ್ಣನಲ್ಲಿ.
ಕರ್ಣ ಗುರಿ ಬದಲಿಸದೆ ಬಿಟ್ಟ.

ರಥವನೆಂಟಂಗುಲನೊತ್ತಿದೆನು ಭೂಮಿಯಲಿ.
ಸರ್ಪಾಸ್ತ್ರ ಕಿರೀಟವನೆ ಕೊಂಡೊಯ್ದಿತು.
ತಲೆಯೆಂಬ ಭ್ರಾಂತಿಯಲಿ.

(ಸರ್ಪಾಸ್ತ್ರ ಘೋರ್ಗರೆಯುತ್ತ ಮತ್ತೆ ಕರ್ಣನೆಡೆ ಬಂದು ಮತ್ತೆ ತೊಡು ಎಂದು ಕಾಡುವದು.)

**ಶಲ್ಯ:—** ತ್ವರೆಮಾಡು ಕರ್ಣಾ ಮರಳಿತೊಡು
ತಡಮಾಡಿದೊಡೆ ಕಾರ್ಯ ಕೇಡು:

**ಕರ್ಣ:—** ತೊಟ್ಟಂಬು ತೊಡುವವನು ನಾನಲ್ಲ ಶಲ್ಯ.

**ಶಲ್ಯ:—** ನನ್ನ ಮಾತು ಮೀರುವದು ಲೇಸಲ್ಲ,
ಪರಿಣಾಮ ಭೀಕರವು ಕರ್ಣ.

**ಕರ್ಣ:—** ಕಲಿಕರ್ಣ ಅನ್ಯರ ನೆರವ ಬಯಸುವವನಲ್ಲ.

(ಶಲ್ಯನು ಸಿಟ್ಟಿನಿಂದ ಚಾಟಿಯನ್ನು ಬಿಸುಟ ಹೊರಟು ಹೋಗುವನು. ಹೋಗುತ್ತಿರುವಾಗ.)

**ಶಲ್ಯ:—** ಎಲ್ಲರೂ ಸ್ವಾಮಿದ್ರೋಹಿಗಳು. ಭೀಷ್ಮನು
ಶಿಖಂಡಿಯ ನೆವವಿಡಿದು ಮಲಗಿದ.
ಆಚಾರ್ಯ ಗಾಳಿವಾತಿನಲಿ ತೇಲಿದ.
ಇದೀಗ ಕರ್ಣನ ಸರತಿ. (ಹೋಗುವನು).

**ಕರ್ಣ:—** (ನಕ್ಕು) ಆವರಲ್ಲಿ ನೀನೊಬ್ಬ.

(ಕರ್ಣನು ತಾನೇ ರಥವನ್ನು ನಡಿಸಿ ಅರ್ಜುನನಿಗೆ ತಾಗುವನು. ಕೃಷ್ಣನು ಮುಗುಳುನಗೆ ನಗುತ್ತ)

**ಕೃಷ್ಣ:—** (ಸ್ವಗತ) ವೀರನೆಂದರೆ ಇವನಲ್ಲದಿನ್ನಾರು ?
ಚಾಗದ ಪರೀಕ್ಷೆಯನು ಜಗಕೆ ತೋರಿಸುವೆನು.

(ಒಮ್ಮೆಲೆ ಕರ್ಣನ ರಥವು ಕೆಸರಿನಲ್ಲಿ ಹೂಳುವದು. ಕರ್ಣನು ರಥದಿಂದಿಳಿದು ಗಾಲಿಯನ್ನು ಎತ್ತತೊಡಗುವನು. ಮುದಿ ಬ್ರಾಹ್ಮಣನೊಬ್ಬನು ಬರುತ್ತಾನೆ.)

**ಬ್ರಾಹ್ಮಣ:—** ಭಿಕ್ಷೆಯ ನೀಡು ಕರ್ಣಾ.

**ಕರ್ಣ:—** **(ಮೇಲೆದ್ದು ಬ್ರಾಹ್ಮಣನನ್ನು ನೋಡಿ ಮುಗುಳ್ನಗೆಯಿಂದ)**
ಬೇಡು ಬೇಡು ಕಪಟನಾಟಕಿ.

**ಬ್ರಾಹ್ಮಣ:--** ಬಾಯಾರುತಿದೆ ನೀರುಣಿಸು ಕರ್ಣಾ.

**ಕರ್ಣ:—** ಕಾಳಗದ ಕಣದಲ್ಲಿ ನೀರೆಲ್ಲಿ ಬರಬೇಕು.
ನನ್ನೆದೆಯಲಿರುವ ಅಮೃತವನೆ ಕೊಡುವೆ.

**(ಬಾಣದಿಂದ ಎದೆಸೀಳಿ ಅಮೃತಕಲಶವನ್ನು ಕಿತ್ತು ಬ್ರಾಹ್ಮಣನ ಕೈಗಳಲ್ಲಿಡುವನು.)**

**ಬ್ರಾಹ್ಮಣ:—** ಭಾರತ ವೀರನ ಕೀರ್ತಿ ಬಹುಕಾಲ ಬೆಳಗಲಿ.
**(ಹೋಗುವನು. ಅವನು ಮರೆಯಾಗುತ್ತಿರುವಾಗ)**

**ಕರ್ಣ:—** ನೀನೆಂಥ ಮರುಳನೋ ಮುರಾರಿ.

**(ಮತ್ತೆ ರಥದ ಗಾಲಿಗಳನ್ನು ಕೀಳತೊಡಗುವನು.)**

**ಕೃಷ್ಣ:—** ಪಾರ್ಥ ಇದುವೆ ಸಮಯ ತೊಡು ಬಾಣ,
ಇದು ಮೀರಿದರೆ ಕರ್ಣನು ಅಜೇಯ ಕಾಣಾ.

**ಅರ್ಜುನ:—** ಕೃಷ್ಣಾ, ಕರ್ಣನೀಗ ಏಕಾಕಿ. ಬಿಲ್ ಬಿಸುಟಿ
ರಥವನೆತ್ತುತಿರುವ. ನಿಃಶಸ್ತ್ರಧಾರಿಯನು
ಕೊಲ್ಲುವದು ನಿಸ್ಸ ಧರ್ಮವೆ ಮುರಾರಿ.
ಹಿಡಿಯಲಾರೆ ಬಾಣಗಳ, ತುಂಬುತಿದೆ ನನ್ನೆದೆ,
ಕಾಣದಾ ಕೈಯೊಂದು ಕೈಬೀಸಿ ಕರೆಯುತಿದೆ.

**ಕೃಷ್ಣ:—** **(ಸ್ವಗತ)** ಅಣ್ಣನೆಂಬರಿವಾಗುತಿದೆ ಅರ್ಜುನನಿಗೆ.
ಭಾವನೆಗೆಡೆಕೊಟ್ಟೊಡೆ ನನ್ನ ಗೀತೆ ವ್ಯರ್ಥ. **(ಪ್ರಕಾಶ)**
ಎಲೋ ಅರ್ಜುನಾ ಕೇಳಿಲ್ಲಿ. ಅಂದು ಅಭಿಮನ್ಯುವಂ
ಕೊಂದವರು ಕೌರವರಲ್ಲವೆ ?
ಕೌರವ ಕರ್ಣರಲಿ ಭೇದವುಂಟೆ.
ಈ ಸೂತಪುತ್ರನಿಗೆ ಮಣಿಸೆಯಾದೊಡೆ

" ಸಂಜೆಯೊಳಗಾಂ ಸೂರ್ಯಸುತನಿಕ್ಕುವೆ''ನೆಂದು
ಅಣ್ಣನಿಗಿತ್ತ ಮಾತು ಮುಸಿಯಾಗದಿರುವವೆ.
ನೀ ಮರೆತರೆ ಸರಿ. ನಾನೇ ಆ ಕಜ್ಜವಂ ಕೈಕೊಳ್ವೆ.

(ಕೃಷ್ಣನು ಚಕ್ರವನ್ನು ತಿರುಗಿಸುತ್ತಾನೆ. ಸುತ್ತ ಬಿರುಗಾಳಿ ಏಳುವದು. ಕರ್ಣನ ಬಾಣವೊಂದು ಕಿಡಿ ಕಾರುತ್ತ ಬಂದು ಕೃಷ್ಣನ ಎದೆಗೆ ತಾಕುವದು.)

**ಕೃಷ್ಣ:—** (ನರಳಿ) ಹಾಂ ಪಾರ್ಥ.

**ಪಾರ್ಥ:—** (ಕೆರಳಿ) ಕರ್ಣ ದೇವರನು ಸ್ಮರಿಸು. ಈ ಬಾಣ
ಗಿರಿಜೆಯುವರ. ಈ ಅಂಜಲಿಕಾಸ್ತ್ರದಿಂದಲೆ ನಿನ್ನವಸಾನ.

(ಕರ್ಣನು ಒಂದು ಕೈಯಿಂದ ರಥದ ಗಾಲಿಯನ್ನು ಎತ್ತಿ ಹಿಡಿಯುತ್ತ, ಬಿಲ್ಲಿನ ಒಂದು ತುದಿಯನ್ನು ಕಾಲಿನಿಂದ ಮೆಟ್ಟಿ, ಇನ್ನೊಂದು ಕೈಯಿಂದ ಝೇಂಕರಿಸುವನು. ಕರ್ಣನು ಅಮೇಲೆ ಬಾಣವನ್ನು ತೆಗೆದುಕೊಂಡು ಒಮ್ಮೆಲೇ ಕಳೆಗುಂದಿ ಅನಂತರ ತಲೆದೂಗುತ್ತ)

**ಕರ್ಣ:—** ಗುರುವಿನ ಶಾಪನೆಂದು ತೋರುತಿದೆ.
ಅಸ್ತ್ರಗಳೊಂದೂ ತಿಳಿಯುವು. ಕತ್ತಲೆ ಕವಿಯುತಿದೆ.
ಕರ್ಣನಿಗೆ ಕಡೆಗಾಲ ಬಂತೆಂದು ಸಾರುತಿದೆ.

(ಅರ್ಜುನನ ಅಸ್ತ್ರವು ಭೋರೆಂದು ಬಂದು ಕರ್ಣನಿಗೆ ತಾಕುವದು. ಕರ್ಣನು ಬೀಳುತ್ತಿರುವಾಗ ಕೃಷ್ಣನು ಕರ್ಣನಿಗೆ ಕೈಮುಗಿದು ರಥವನ್ನೋಡಿಸುತ್ತಾನೆ.)

**ಕರ್ಣ:—** ಕೆ - ಳೆ - ಯಾ ಕೌ - ರು - ವೇ - ಶ್ವ - ರಾ
ನಾ - ನಿ - ನ್ನು ಬ - ರು - ವೆ ಅ - ಮ್ಮಾ
ರಾ - ಧೆ ಕುಂ - ತೀ ಮು - ರಾ - ರಿ
(ಮುಳುಗುವ ನೇಸರನತ್ತ ತಿರುಗಿ) ಬ · ರು · ವೆ · ತಾ · ತಾ

(ಕಣ್ಮುಚ್ಚುವ. ಪ್ರಜ್ವಲಿಸುವ ಕಳೆಯೊಂದು ಕರ್ಣನ ದೇಹದಿಂದ ಹೊರಟು ಮುಳುಗುತ್ತಿರುವ ನೇಸರಿನಲ್ಲಿ ಕೂಡಲು ಪಡುವಣ ದಿಕ್ಕಿಗೆ ಹೋಗುವದು. ಕೌರುವೇಶ್ವರನೂ, ಅವನ ಹಿಂದೆ ರಾಧೆಯೂ ಬರುತ್ತಾರೆ.)

**ಕೌರವ:**— ಹಾಯ್ ಕೆಳೆಯ ಕರ್ಣಾ...........
(ಮೂರ್ಛೆಹೋಗುವನು.)

**ರಾಧೆ:**— ಹಾಯ್ ಮಗನೇ. (ಕರ್ಣನನ್ನಪ್ಪಿ ಬೀಳುವಳು.)

—:( ತೆರೆ ಸರಿಯುವದು ):—

—: ತೆರೆಯ ಹಿಂದೆ :—

ನೆನೆಯದಿರಣ್ಣ ಭಾರತದೊಳಿನ್ ಪೆರರಾರುಮನೊಂದೆ ಚಿತ್ತದಿಂ ।
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇರು ಕ ॥
ರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನಚಾಗಮೆಂದು ಕ ।
ರ್ಣನ ಪಡೆಮಾತಿನೊಳ್ ಪುದಿದು ಕರ್ಣ ರಸಾಯನಮಪ್ಪಿ ಭಾರತಂ ॥

**ಪಂಪ.**

**: ಮುಗಿದುದು :**

# ಸಿವನ ಸೋಲು



"ಸಿವನ ಸೋಲು" ಈ ಚಿಕ್ಕ ಕೃತಿಯನ್ನು
ಮಹಾಕವಿ ಆಂಡಯ್ಯನ ಅಡಿದಾವರೆಗಳಲ್ಲಿ
ಅರ್ಪಿಸಿದೆ.

# ೧ನೆಯ ನೋಟ

(ಕಾವನ ಚಾವಡಿ. ಸುತ್ತಲೆಲ್ಲ ಸಿಂಗರಿಸಿದ ಆಸನಗಳು. ಓಲಗವು ಮನ್ನೆಯರಿಂದ ತುಂಬಿದೆ. ಬಾಗಿಲಲ್ಲಿ ಭಟ್ಟಂಗಿಗಳು ಸಾರುತ್ತಿದ್ದಾರೆ.)

ಬಿರಯಿಗಳೆಂಬ ಮಿಗಂಗಳ ಬೇಂಟೆಕಾರ.
ನೀರೆಯರ ಮನಸೆಳೆವ ಸೊಗಗಾರ.
ಮದಿಸಿದರಿಗಳೆಂಬಾನೆಗಳ ಮಾವುತ.
ಸೆಣಸಿದವರಂ ಕಡಿದೊಟ್ಟುವ ಕರ್ವುವಿಲ್ಲ.
ಇಚ್ಛೆಗಾರ್ತಿಯ ಅರಸ ಕಮ್ಮಂಗೋಲ.
ತ್ರಿಭುವನ ಬೀರ ಅಲರ್ಗಣೆಯ.
ಸಿಂಗಾರಕಾಗರವಾದ ನನೆಗಣೆಯ.
ಮುನಿಗಳಿಗೆ ಭಯಂಕರ ಕಾವ
ತಡೆದವರಿಗುತ್ತರಿಸುವವು ಪಂಚಬಾಣ.
ಕಂಪಿನಪೊಳಲರಸರಿಗೆ ಜಯಕಾರ.
ಜಯ ಜಯಕಾರ ಜಯಕಾರ.

(ಕಾವನು ಇಚ್ಛೆಗಾರ್ತಿಯೊಡಗೂಡಿ ಬರುತ್ತಾನೆ. ಸಭಿಕರು ಎದ್ದುನಿಂತು ಮರ್ಯಾದೆಯಿಂದ ಸ್ವಾಗತಿಸುವರು. ಕಾವನು ಮಣಿಗದ್ದಿಗೆಯ ಮೇಲೆ ಮಂಡಿಸುವನು.)

**ಕಾವ:**— ಎನ್ನೊಲಿಮೆಯ ಮನ್ನೆಯರೆ, ಮಂಡಿಸಿರಿ ನಿಮ್ಮಾಸನದಿ.

**ಮನ್ನೆಯರು:**— ಪ್ರಭುವಿನಪ್ಪಣೆ, (ಕುಳಿತುಕೊಳ್ಳುವರು)

**ಕಾವ:** — ಕಂಪಿನಪೊಳಲ ಪುರನಿವಾಸಿಗಳೆ ಕೇಳಿ.
ನಿಮ್ಮರಾಯನಿಂದಾವ ನೆರವು ಬೇಕು ಹೇಳಿ.
ನೀವೆನ್ನ ಎದೆಯೊಲವಿನ ಮೂರ್ತಿಗಳು.
ನಿಮ್ಮಾನಂದದಲ್ಲಿದೆ ನನ್ನ ಕೀರ್ತಿ.

**ಪ್ರಜೆಯೊಬ್ಬ:**—ಪ್ರಭುವಿನ ರಾಜ್ಯದಲಿ ಆಶೆಗಳಿಗೆಡೆಯಿಲ್ಲ.
ಶಾಂತಿನೌಕೆಯಲಿ ಸಾಗಿಹುದು ನಮ್ಮ ಬಾಳು.

ಕಾವ:— ಹಾಗಾದರೆ ಸಗ್ಗವೆನ್ನ ರಾಜ್ಯಕೆಣೆಯಿಲ್ಲ.
ಪ್ರಜರ ಶಾಂತಿಯುಲಿ ಸಲಹುವನ ಸುಖವಿಹುದು.
ಅವರಾನಂದದಲ್ಲಡಗಿಹುದು ನನ್ನ ಶಾಂತಿ.

ಮನ್ನೆ:— ಪ್ರಜರ ಅನುಮತಿಯಂತೆ ಪಾಲಿಸುವ
ನಮ್ಮೀರಾಜ್ಯ, ಸತ್ಯ ಶಾಂತತೆಯು ಬೀಡು.

(ಸೇವಕನೊಬ್ಬನು ಬಂದು ಮಹಾರಾಜನಿಗೆ ಮಣಿದು)

ಸೇವಕ:— ಪ್ರಭುವೆ ನಾಟ್ಯಶಾಲೆಯುಲಿ ನರ್ತಕಿಯರು
ಕಾದುನಿಂತಿಹರು.

ಇಚ್ಛೆಗಾತಿ:—ಬರಮಾಡು. ಭರತನಾಟ್ಯವ ನೋಡಲೆಳಿಸುವೆನು.

(ಸೇವಕನು ಮಣಿದು ಹೋಗುವನು. ನರ್ತಕಿಯರು ಬರುವರು. ಭರತ ನಾಟ್ಯ ಮುಗಿಯುವದರಲ್ಲಿದ್ದಾಗ ಮತ್ತೆ ಸೇವಕನು ಬಂದು ಮಣಿದು)

ಸೇವಕ:— ಪ್ರಭುವೆ ಜೊನ್ನವಕ್ಕಿ ತಮ್ಮ ದರುಶನಕಾಗಿ
ದ್ವಾರದಲಿ ಕಾದು ನಿಂತಿಹನು, ಅವಸರದ
ಕಜ್ಜವೊಂದಿದೆಯೆಂದು ಹೇಳುವನು.

ಕಾವ:— ಬರಮಾಡು.

(ಸೇವಕನು ಹೋಗುವನು. ಜೊನ್ನವಕ್ಕಿ ಬಂದು ಕಾಣಿಕೆಗೊಟ್ಟು ಕೈ ಮುಗಿದು ನಿಲ್ಲುವನು.)

ಕಾವ:— ಅವಸರಕೆ ಕಾರಣವೇನು ಜೊನ್ನವಕ್ಕಿ?

ಜೊನ್ನವಕ್ಕಿ:—ಕೇಳರಸ, ನಿನಗೆಂದು ತಲೆವಾಗದ,
ನಿನಗಳ್ಕದ, ನಿನ್ನ ವೇಳೆ ಗಾಯದ,
ಹಿರಿದುದನು ನಿನಗೆ ಬೆಸಕೈಯ್ದು ಬಾಳದ,
ನಿನಗೋಡದ, ಹಗೆಗಳಿಹರೆ ಧರಣಿಯುಲಿ.

ಕಾವ:— (ತಲೆನೆಗಿ) ಮುಂದೆ ?

**ಜೊನ್ನವಕ್ಕಿ:**—ಆದರೀಗಳೆ ಶಿವನೆಂಬ ದುಷ್ಟ ಗೊರವನು,
ಮಂಜುವೆಟ್ಟವನು ಗೊಟ್ಟಂಮಾಡಿ, ಕಿತ್ತಡಿಗಳನು
ಮರುಳ್ವಿಡೆಗಳನು ಕೂಡಿಕೊಂಡು, ನಿಮ್ಮಡಿಗಳನು
ಮರೆದು ಲೆಕ್ಕಿಸದೆ ಮೇಲೆ ಬೀಳ್ದ ಹಾವು
ನೇವಾಳವಾಗೆ ಮೆಯ್ಯುರಿಯದಿರ್ಪನು.

**ಕಾವ:**— (ಸಿಟ್ಟಿನಿಂದ) ಮರುಳರಸನ ಮರುಳ ಬಿಡಿಪನು ಕಾವ.

**ಜೊನ್ನವಕ್ಕಿ:**—ಕೇಳೊಡೆಯ,
ತಳಿರೆಂದೊಡೆ, ಒಸಗೆಯೆಂದೊಡೆ,
ಗಿಳಿಯೆಂದೊಡೆ, ಕರೆವಕೋಗಿಲೆಗಳೆಂದೊಡೆ,
ಬಂದೆಳವಾವೆಂದೊಡೆ, ಗೊರವನೊಡ್ಡುಮುರಿವ.

**ಕಾವ:**— (ಕಿಡಿಕಿಡಿಯಾಗಿ) ಗೊರವನ ಗರ್ವವನು ಗಾಳಿಯಲಿ
ತೂರುವೆನು.

**ಜೊನ್ನವಕ್ಕಿ:**—ಆಲಿಸು ಅರಸ.
ಪುದಿದುರಿಗಣ್ಣನಾಳೆಯುನದೇವೊಗಳ್ವೆನು,
ಮುಟ್ಟಬಾರದು ಮುಗುಳೆಂದು,
ಬಾಯ್ದೆರೆಯಬಾರದು ಬನವೆಂದು,
ಸೂಡಬಾರದು ಸಂಪಿಗೆಯೆಂದು,
ಕೈದುಡುಕಬಾರದು ಕೊಳನೆಂದು,
ತೋರಬಾರದು ತಾವರೆಯೆಂದು,
ಉಸುರಬಾರದು ಹೊಸ ಸುಗ್ಗಿಯೆಂದು,
ತನ್ನ ಮಂಜುವೆಟ್ಟದೊಳರಸ.

**ಕಾವ:**— ಮಂಜುವೆಟ್ಟವನು ಪಾತಾಳಕೊತ್ತುವೆನು.

**ಜೊನ್ನವಕ್ಕಿ:**—ಕೇಳು ಪ್ರಭು.
ಸರಿಯೊಳಾದೊಡಮಂಚೆಯೆಂಬುದನು,
ಕೆರೆಯೊಳಾದೊಡಂ ಬಾಳೆಯೆಂಬುದನು,
ಸಿರಿಕಂಡದೊಳಾದೊಡಂ ಆರಡಿಯೆಂಬುದಃ
ಕೊಡಗೂಸಿನುಡಿಗೆಯೊಳಾದೊಡಂ

ಸೋಗೆಯೆಂಬುದನು,
ಬೆದಂಡೆಯೊಳಾದೊಡಂ ಹಾಡೆಂಬುದನು,
ಕೇರಿಯೊಳಾದೊಡಂ ನೆರೆಯೆಂಬುದನು,
ಚಪ್ಪರಣೆಯೊಳಾದೊಡಂ ಹೆಣ್ಣೆಂಬುದನು,
ಸೈರಿಸನು.

**ಕಾವ:—** ಗೊರವನಿಗೆ ಕೇಡು ಕಾದಿದೆ.

**ಜೊನ್ನವಕ್ಕಿ:—** ಅಲ್ಲದೆ ಈ ಹೋದಿರುಳು ಕಾಳಗವನು ಕಾದಿ .......

**ಮನ್ನೆ:—** (ನಡುವೆ) ಕಾವನೊಡನೆ ಕಾಳಗವೆ ?

**ಜೊನ್ನ:—** ಅಹುದು. ತಾರಗೆಗಳಳಿದವು.
ನೈದಿಲೆಗಳು ನೀರಲಿ ಹೊಕ್ಕವು.
ಕಡಲು ಮೈಯ್ಯುರ್ಚಿತು.
ಭುವನತಲ ಮಬ್ಬುಗವಿಯಿತು.

**ಮನ್ನೆ:—** ಏಕೆ ?

**ಜೊನ್ನ:—** ಆ ಗೊರವ ಪೆರೆಯನು ಬಾಳ್ದಲೆವಿಡಿದುದಕೆ.

**ಕಾವ:—** ಕಲಿತನದಿ ಜವನ ಹತ್ತುವೆನು.
ಕಟ್ಟಿ ತೂಗುವೆನು ಒಂಭತ್ತು
ಗರಗಳನು, ಗೊಂಟಿ ಎಂಟರೊಳು.
ಕಡಂಗಿ ಕುಡಿವೆ ಕಡಲನೇಳು.
ತಳಾರಲಂ ಪೊಯ್ದು ತೂಗುವೆನು.
ಐದುಮೊಗದವನ ಕೆಡಹುವೆನು.
ನಾಲ್ಕು ದಳಗಳ ನೂಕಿ ನುಗ್ಗುವೆನು.
ಮೂರಡಿಯಿಟ್ಟ ನಚ್ಚಿಯೆರಡಂತೊಂದಾಗಿ
ನೋಡುವೆನು.

**ಬಳಂತ:—** ಒಡೆಯನಿಗೆ ಅಸಾಧ್ಯವಾವುದಿದೆ.

**ಕಾವ:—** ಇದಿರಾಗುವ ನಾರೆನಗೆ, ಮಾರಿಗೆ,
ತ್ವರಿತದಲಿ ಮುಂಜುವೆಟ್ಟಕೆ ಹೋಗಿ,
ಮುಕ್ಕಣ್ಣನ ಜಡೆಯನು ಕಿತ್ತು,

ಬಳಿಯುಲಿರುವ ಪೆರೆಯು ತರುವೆ.

**ಬಸಂತ:**— (ವಿನಯದಿಂದ)

ನೆಲದರಿಕೆಯ ಬಿದಿಯ ಮಣಿಸಿ,

ಇಂದಿರನನು ತವಸಿಗಳನು ನೋಯಿಸಿ,

ಮೆರೆದ ನಿನ್ನಲರಂಬಿನ ಮೊನೆಗೆ,

ಹೇಳೊಡೆಯ ಬಡಗೊರವ ನಿಲ್ವನೆ.

**ಕಾವ:**— ತಕ್ಕುದದನೆ ನುಡಿದೆ.

**ಬಸಂತ:**— ಆದರೆ........

**ಕಾವ:**— ಆದರೇನು. ?

**ಬಸಂತ:**— ಗೊರವನಲ್ಲಿಗೆ ದೂತನನು ಅಟ್ಟಿ

ರಾಜಧರ್ಮವನುಳಿಸಿ ಕಾದೋಣ.

**ಕಾವ:** — (ತಲೆದೂಗಿ) ತೆಂಗಾಳಿ ಗೊರವನಲ್ಲಿಗೆ ಹೋಗಿ ನಮ್ಮ

ಪೆರೆಯುನು ತಡೆಯದೆ ಬಿಡಿಸಿಕೊಂಡು ಬಾ.

**ತೆಂಗಾಳಿ:** — (ತಲೆವಾಗಿ) ಪ್ರಭು ನಿನ ಆಜ್ಞೆ .......(ಹೋಗುವನು.)

**ಕಾವ:**— ನನ್ನೊಲಿಮೆಯ ಪ್ರಜರೆ ಕಾಳಗವು

ಕೈಗಟ್ಟಿದೊಡೆ, ನಮ್ಮ ರಕುತದ ನದಿಯನೆ

ಹರಿಸಿ ರಾಜ್ಯದ ಕೀರ್ತಿಯನು ಕಾಯೋಣ.

ಬಡಗೊರವನಿಗೆ ಬೆದರಿ ಬಾಳುವನೆ

ನಿಮ್ಮೊಡೆಯ ಭುವಿಯಲ್ಲಿ

**ಎಲ್ಲರು:** — ಎಮ್ಮೊಡೆಯನಾಣತಿಯುಮಗೆ ವೇದಮಂತ್ರ. ಗುಡಿಗಾಗಿ

ಕಾದಿ ಗೆಲ್ಲುವೆವು.

(ಭಟ್ಟಂಗಿಗಳು ಸಾರುತ್ತಿರುವಾಗ)

— ತೆರೆ —

## ೨ನೆಯ ನೋಟ



( ಕುಂಜುವೆಟ್ಟದ ಮೇಲಿನ ಓಲಗಶಾಲೆಯಲ್ಲಿ ಶಿವನು ಬೀರ ಗಣೇಶರೊಡ ಗೂಡಿ ಕುಳಿತಿದ್ದಾನೆ. ತೆಂಗಾಳಿ ಬಂದು ನಮಸ್ಕರಿಸುವನು.)

**ಶಿವ:**— ನೀನಾರು.

**ತೆಂಗಾಳಿ:**— ನಾನು ಕಾವ ಮಹರಾಜರ ದೂತ.

**ಶಿವ:**— ಅದಾವ ನೆಪವಿಡಿದು ಬಂದಿರುವೆ?

**ತೆಂಗಾಳಿ:**— ನನೆವಿಲ್ಲ ಬಲ್ಲಹನು ನಿಮ್ಮಡಿಗಳ ಹೆಸರನು
ಹಲವರಿಂದ ಕೇಳ್ದು, ಕೆಳೆತನವ ಬಳೆಯಿಸುವ
ಇಚ್ಛೆಯಿಂದೆನ್ನ ಕಳುಹಿದನು.

**ಶಿವ:**— ಕೆಳೆತನಮಂ ಬಳೆಯಿಸುವಿಚ್ಛೆಯಿಂದ........

**ತೆಂಗಾಳಿ:**— (ನಡುವೆ) ಅಹುದು. ಆತನ ಬಲ್ಪಂ ಹೊಗುಳ್ವದೆನ್ನ
ಪವಣಲ್ತು. ಆದೊಡಂ ಅರಿವನಿತಂ ಪೇಳುವೆನು.

**ಶಿವ:**— (ನಕ್ಕು) ಆಗಲಿ.

**ತೆಂಗಾಳಿ:**— ಕಡುಪಿಂದಾತನೊಳಾಂತರೋಡಿ,
ಬನವಹೊಕ್ಕು, ಹೊದರು ಹುಡುಕಿ,
ಹಸಿರು ಎಲೆಯ ಮರೆಯುಲಡಗಿ,
ಮರವನೇರಿ ಬಾಳ ಮುರಿದರು,
ಜಗದಿ ಮೆಯ್ಸಿರಿಗೆಟ್ಟು ನಿಂತರು.
ಕಾಣೆನೆಂದು ಜಗದಿ ನಾನು,
ಅವನಿಗೆದುರು ಆಗಿ ನಿಂದು,
ಬಾಳುವವರನಿನ್ನು ತನಕ.
ಕರ್ವಿನಕೋಲ ಬಿಲ್ಲು ಮಾಡಿ,
ಸರಲುಗಳನು ಮಾವು ತುಂಬಿ
ಪೊಸದಾವರೆ ಮಲ್ಲಿಗೆಗಳನೆ ಮಾಡಿ,

ಮೆರೆವ ಒಡೆಯನನ್ನು ಕೆಣಕಿ
ಸೆಣಸಿ ನಿಂತೊಡೆ, ಗೈಯ್ವ
ದೆಸೆವಲಿ. ಹೆಸರುಪಡೆದ ಆತನೊಡನೆ
ಎಂಟೆದೆಯುಳ್ಳನಾದೊಡೇಂ ಪೋಣರ್ದು ಬಾಳ್ವರೆ.

**ಶಿವ:—** ಹಲವು ಗಳುಪಲೇತಕೆ, ನಿನ್ನ ಕಜ್ಜವನುಸಿರು.

**ತೆಂಗಾಳಿ:**—ಎಮ್ಮೊಡೆಯ ನಿಮ್ಮ ಚಾಗವನು,
ಸಿರಿಯುನು, ಆಳ್ತನವನು, ಮೈಸೊಂಪನು,
ಮನ್ನಣೆ ಹೊಂದಿದ ಜಸವನು,
ನಿಮ್ಮ ನನ್ನಿಯ ಮಾರ್ಗವನು ಕೇಳಿ,
ಕಳತನವ ಬಳಿಯಿಸಲು ಕಳುಹಿದನು.
ನೀವೀರ್ವರು ನಲ್ವಗೆಗೊಂಡೊಡೆ
ಪೊನ್ನದು ಕಮ್ಮಿತಾದ ತೆರನಲ್ಲವೆ?
ನಿಮ್ಮೊಳಾತನು ಕೆಳಗೊಂಡೊಡೆ,
ತೀರಿದುದು ಇನಿತಿಲ್ಲವಾದುದರಿಂದ
ಈಗಲೇ ಪೆರೆಯ ಸೆರೆಯ ಬಿಡುವದು ಲೇಸಲ್ತೆ?

**ಶಿವ:—** (ನಸುನಗುತ್ತ) ಕೋಡುವ ಕೊಂಕುವ ಚೆಂದವನು
ನೋಡಿರಿ ಕಾಳಗಕೆ ಬೆಂಬಲವನು ಗಡ!
ಹೆಂಡಿರು ಸೂಡುವ ಅಲರಂಬು ಗಡ!
ಹಿಡಿದಾಡುವ ಕಬ್ಬು ಗಡ! ಬಿಲ್ಲಿದೇನಚ್ಚರಿ?
ಪಡೆವುರವಟ್ಟ ಮಾವುಗಡ! ಬೆಳ್ಗೊಡೆ
ಆಗಸಕೇಳ್ದ ಚಂದವಂ ಗಡ! ಪೊಸ
ಬೆಳ್ಳಿದಾವರೆಗಳಾವೆಡೆಯೊಳು ನಡೆವಲ್ಲಿ
ಕೊಯ್ದ ಹೂ ಗುಡಿಗಡ! ಕೊಂಬುಗೊಂಡು
ಉಸಿರದಿರ್ಪ ಬಸಂತನಿವರ್ಕೆ ತಾನೆ
ಪೆರ್ಗಡೆಗಡ! ನಿಮ್ಮಲರೆಂಬನೆಂಬನಾ
ಗೆಲ್ಪ ತಕ್ಕರಿಯಲಾದುದು.

**ತೆಂಗಾಳಿ:**—ಎನ್ನೊಡೆಯನ ಬಲ್ಪಂ ನೀವಿನ್ನು ಕಂಡಿಲ್ಲ.
ಬನ್ನವನು ಪಟ್ಟನು ಬಿದಿಯೆಂಬ ಅಣ್ಣನು.
ಅಲರಸವಿಯನರಿತಿಹನು ಮೆಯ್ಗಣ್ಣನು.
ಯಕ್ಷರಕ್ಕಸರು ಮಾನಸರು ತಿಳಿದಿಹರು;
ಧರತಲವು ಅರಿತಿಹುದು ಅವನಾಳ್ತನ.

**ಸಿವ:**— ಉರ್ಕಾಳ್ಗಳಾದೊಡೇನು ಕೇಳು, ಸೊರ್ಕಾನೆಯು
ಕೈಯ ಕರ್ವನಿನಿತುಂ ಸೆಳೆಯಲು
ಸಾಧ್ಯವೆ ? ಪೆರೆಯನು ಬಿಡೆನು.
ಮತ್ತೊಂದು ಕಜ್ಜವಿದ್ದೊಡೆ ನುಡಿ.
ಎಲವೊ ಹಲವು ಮಾತುಗಳಿಂದೇನು,
ನಿಮ್ಮೊಡೆಯನಲಿ ಬಲವಿದ್ದೊಡೆ,
ಕಾಳಗದ ಕಣಕೆ ಬೇಗನೆ ಬರಲಿ.
ಆಬಳಿಕ ನೀ ನಮ್ಮೀರ್ವರ ಬಲ್ಮೆ ಕಾಣುವಿಯಂತೆ.

**ತೆಂಗಾಳಿ:**—ಕಾಣುವಿರಿ ನಾಲ್ಕೆರಡು ಪಗಲೊಳಗೆ
ಎಮ್ಮೊಡೆಯನ ಕೈಯ ನನೆಯ ಕೋಲಾಟವನು.

( ತೆಂಗಾಳಿಯು ಓಲಗಶಾಲೆಯಿಂದ ಹೊರಟು ಹೋಗುವನು )

**ಸಿವ:**— ಬೀರ ಗಣೇಶರೆ ಕಾವನೊಡನೆ ಕಾಳಗವು ಕೈಗಟ್ಟುವಂತಿದೆ
ಕಾವನಿಗೆ ಕಡೆಗಾಲ ಕಾದುನಿಂತಿದೆ.

**ಗಣೇಶ:**— ಸಂದೇಹವೇನು ?

**ಬೀರ:**— ಕೈಗಟ್ಟಲೇನಂತೆ ಬೀರರಿಗೆ ಕಾಳಗವೆ ಹಬ್ಬಮಲ್ತೆ.

( ಭಟ್ಟಂಗಿಗಳು ಓಲಗಮುಗಿಯುವ ವೇಳೆಯಾಯಿತೆಂದು ಸಾರುವರು. ಸಿವನು ಎಲ್ಲರಿಗೂ ಹೊರಡಲನುಮತಿಯ ನೀಯುವನು. ಎಲ್ಲರೂ ಮರ್ಯಾದೆಯಿಂದ ಸಿವನಿಗೆ ನಮಸ್ಕರಿಸುತ್ತಿದ್ದಾಗ )

—ತೆರೆ—

# ೩ನೆಯ ನೋಟ



( ಕಾವನ ಓಲಗ. ಎಲ್ಲ ಸಭಿಕರೂ ವಿಚಾರಮಗ್ನರಾಗಿ ಕುಳಿತಿದ್ದಾರೆ. )

**ಕಾವ:—** ಬಸಂತ ಬಡಗೊರವನಲ್ಲಿಗಟ್ಟಿದ ನಮ್ಮ ತೆಂಗಾಳಿ
ತಡಮಾಡುತಿಹನೇಕೆ ?

**ಬಸಂತ:—** ಇದೀಗ ಬರಬಹುದು ಪ್ರಭು.

( ಸೇವಕನು ಬಂದು ನಮಸ್ಕರಿಸಿ )

**ಸೇವಕ:—** ಬಾಗಿಲೊಳು ತೆಂಗಾಳಿ ಕಾದಿಹನು ಅನ್ನದಾತಾ.

**ಕಾವ:—** ಬರಮಾಡು.

( ಸೇವಕನು ನಮಸ್ಕರಿಸಿ ಹೋಗುವನು. ತೆಂಗಾಳಿ ಬಂದು ಪೊಡಮಟ್ಟು ನಿಲ್ಲುವನು )

**ಕಾವ:—** ತೆಂಗಾಳಿ ಬಡಗೊರವ ಪೆರೆಯು ಸೆರೆಯು ಬಿಟ್ಟನೆ ?

**ತೆಂಗಾಳಿ:—** ಪೆರೆಯನು ಬಿಡೆನೆಂದು ಕಾಳಗವನು
ಮುಂದಿಟ್ಟು ಕೊಂಡಿಹನು.

**ಕಾವ:—** ( ತಿರಸ್ಕಾರದ ನಗೆಯಿಂದ )
ಉಡುವ ಪುಲಿದೊಗಲೋ !
ಕೈಯೊಳು ಹಿಡಿದ ಲಾಗುಳದ ಕೋಲೋ !
ಬಗರಿಗೆಯೋ ! ಕೆಂಜೆಡೆಯೋ ! ಪೂಸುವ
ಬೂದಿಯೋ ! ಬಡಗೊರವಂಗೇಕೆ
ತನಗೆ ಕಾದುವ ಬೆಸನ.
ಕಡಲೊಳು ಮುಳ್ಗಿರೆಯಲಿ,
ಪೊಡವಿಯೊಳು ಹೊಗಲಿ,
ಬೆಟ್ಟದೊಳು ನುಗ್ಗಲಿ,
ದೆಶೆಗಳೊಳು ಅಡಗಲಿ,

ಬಿಡುವವೆ ಹೂಬಾಣ.
ತಿಸುಳಿ ತಾನೆತ್ತ ಹೋಗುವವನು.

ತೆಂಗಾಳಿ:—ನಿಮ್ಮಾಳ್ತನವ ಹಳಿದು ನುಡಿದನು.

ಕಾವ:— ಅದಟಿನೊಳುರ್ಕೆಯಂ ಕಿಡಿಸಲಾಂಬರನೆ.
ತನಗೊಂದು ಕಬ್ಬು ಸಾಲದೆ ?
ಮರಿದುಂಬಿ ಸಾಲದೆ ?
ಬಂದವೂವು ಸಾಲದೆ ?
ಸುಳಿವಂತೆ ಸಾಲದೆ ?
ಕಾಯ್ತು ತೆಂಗು ಸಾಲದೆ ?
ಪೊಸನೀರವೆಣ್ಣುನುಡಿ ಸಾಲದೆ ?
ಅದಟಿನೊಳುರ್ಕೆಯಂ ಕಿಡಿಸಿ,
ಬಿಂಕವನು ಅಳಿಸಿ,
ಸದೆದರವೆಣ್ಣನಂ ಮಾಡುವೆನು.

ತೆಂಗಾಳಿ:—ಇರ್ವರ ಬಲವುಂ ನೀ ಕಾಳಗದೊಳು ಕಾಣೆಂದು
ನುಡಿದನು ನೊಸಲಗಣ್ಣ.

ಕಾವ:— (ಸಿಟ್ಟಿನಿಂದೊಡಗೂಡಿದ ದರ್ಪದಿಂದ) ಬಸಂತ
ಇಂದು ಪಡೆಯುಳ್ಳವು ಪಲವು ಸಂದಣದಿಂದ ಬರಲಿ.

ಬಸಂತ:— ಸುಗ್ಗಿ ತೆಂಗಾಳಿಗಳೀರ್ವರೂ ಸಜ್ಜಾಗಿ ನಿಂತಿಹರು
ನೋಡರಸ.

( ತಣ್ಣನ್ನ ಗಾಳಿ ಬೀಸತೊಡಗುವದು. ನೋಡಿದತ್ತೆಲ್ಲ ವಸಂತ ಮಾಸದ ಸಿರಿಯು ಶೋಭಿಸುವದು. )

ಕಾವ:— ಇದೀಗ ನನ್ನ ಬಿಜ್ಜೆಯ ಬಲದಿಂದ
ಹುಸಿಪಡೆಯ ಹುಟ್ಟಿಸುವೆನು.

( ಕಾವನು ತೆರೆಯುತ್ತ ಕೈಮಾಡುವನು. ತೆರೆಯಲ್ಲಿ ಗಿಳಿ ಕೋಗಿಲೆಗಳ ಮಧುರ ನಿನಾದವು ಕೇಳ ಬರುತ್ತದೆ.)

ಬಸಂತ:— ಅರಗಿಳಿ ವಿಂಡು. ಮೋಹರವಾರದಿವಿಂಡು,
ಬಿಲ್ಲ ಬೀರರ ಪಡೆ, ಕೊಂಚೆವಿಂಡು,

ಪಲವಡ್ಡಣದೊಡ್ಡಮಳ್ಪಕ್ಕಿ ಏಂಡು,
ಮೆಯ್ಪುರಸುವ ಕೊಂತಗಾರಣಿಯಾಗಿಹುದು,

**ಕಾವ:—** (ನಗುನಗುತ್ತ)
ಬಡಗೊರವನಿನ್ನು ಬಾಳುವನೆ ಭುವಿಯಲ್ಲಿ.
ಕಾವನನು ಕೆಣಕುವರಾರು ಧರಣಿಯಲಿ.
ತನ್ನ ತೋಳ್ಬಲವ ನರಿಯದಲೆ ಮೇಲ್ವಾಯ್ದ.

**ತೆಂಗಾಳಿ:**—ತಿಸುಳಿ ತಾನೆಂಬ ಗರ್ವವಿದೆ ಗಿರಿಜೆಯರಸನಿಗೆ.

**ಕಾವ:—** ತಿಸುಳಿಯ ತಿಳುವಳಿಕೆ ಮಸಣಿಸಿದೆ,
ಸೋಲಡಸಿ ನಿಂತಿದೆ.

( ತೆರೆಯಲ್ಲಿ "ಕಾವ ಮಹರಾಜರಿಗೆ ಜಯವಾಗಲಿ" ಎಂಬ ಜಯಕಾರ ಕೇಳಬರುತ್ತದೆ.)

**ಬಸಂತ:—** ಪಡೆಕಾದು ನಿಂತಿದೆ ಕಾಣರಸ, ಪೊರಡಲನುಮತಿಯೆ.

**ಕಾವ:** — (ಪಡೆಯತ್ತ ನಿರೀಕ್ಷಿಸಿ) ನಡೆ

( ಕಾವ ಬಸಂತರು ಹೋಗುವರು. "ಕಾವಮಹರಾಜರಿಗೆ ಜಯವಾಗಲಿ" ಎಂಬ ಧ್ವನಿಯು ಮುಂದಮುಂದವಾಗಿ ಕೇಳಬರುತ್ತಿರುವಾಗ )

—ತೆರೆ—

# ೪ನೆಯ ನೋಟ



( ಅರಣ್ಯದ ದಾರಿ. ಗಿಳಿಗಳು ಎಳೆಯುತ್ತಿರುವ ತೇರಿನಲ್ಲಿ ಕುಳಿತು ಕಾವನೂ ಅವನಹಿಂದೆ ಮತ್ತೊಂದು ತೇರಿನಲ್ಲಿ ಬಸಂತನೂ ಬರುವರು. )

**ಬಸಂತ:—** ಪಡೆ ಬರುತಿರ್ಪ ಬಲುವ ನೋಡರಸ.

ಗಲ್ಲದ ಸೊರ್ಕನೀರಿನಿಂದಕಡಲ ತುಳುಕಿಸಿ,

ಜಲ್ಲನೆ ಪಾಡುವ ತುಂಬಿಗಳ ಹೆದರಿಸಿ,

ಬಿಂಕದಿನಂಕದ ಆನೆಗಳು ಬರುತಿಹವು.

ಪಕ್ಕರೆಕ್ಕೆಗಳ ಗೆಜ್ಜೆಯ ಗುಲುಗುಲಿಸುತ,

ಪೊಳೆವ ಚೌರಿಯ ಗಾಳಿಯಲ್ಬೀಸುತ,

ಕುದುರೆಗಳು ಕುದುರತ ಬರುತಿಹವು.

ಬೆಟ್ಟವ ಪುಡಿಪುಡಿ ಮಾಡುತಲಿ,

ಧೂಳಿಯನಾಗಸ ಕೆರುಚತಲಿ,

ತೇರ್ಗಳೋಗಳು ಬರುತಿಹವು.

ಸಿಡಿಲನುಅಣಗಿಸಿ ಸಿಂಗವನಂಜಿಸಿ,

ಮಾರಿಯುಪೊಸೆದು, ಮಿಳ್ತುವನೊತ್ತಿ,

ತುಳಿಲಾಳ್ಗಳ ಬಲ್ಲಣೆ ಬರುತಿಹುದು.

**ಕಾವ:—** (ಎದುರಿನ ಬೆಟ್ಟಾದತ್ತನೋಡಿ) ಬೆಟ್ಟದ

ಸೊಬಗಿದೇಂ ಚಲ್ವಾಂತಿದೆ ಬಸಂತ.

**ಬಸಂತ:—** (ವಿನಯದಿಂದ ನಮಸ್ಕರಿಸಿ)

ಸೊಬಗಿಗೆ ಕಳಸವಿಟ್ಟಿರುವದನು ಕೇಳ್ದೊರೆಯೆ.

ತೊಲಗದೆ ನಡೆಗೊಂಡಿರುವವು

ಸಲೆಮುಳಿಸನಳಿದು, ಹಾವುನವಿಲುಗಳು,

ಹುಲಿಮರಿವುಲ್ಲೆಗಳು,

ಸಿಂಗವುಮಾನೆಗಳು,

**ಕಾವ:—** ಜಾತಿವೈರಿಗಳೆಂತು ಕೂಡಿಹವು?

**ಬಸಂತ:—** ಇನ್ನೂ ಕೇಳರಸ.
ಕೊಲ್ಲದುದೆ ದಿಟದಿ ನರಸೆಂದು
ಎಲ್ಲಾಪರಿಯಿಂದ ಪೇಳ್ದ ಹಿರಿಯರ
ನುಡಿಯನು, ಬಲ್ಲಿತೆನೆ ನಂಬಿ,
ಬೇಂಟೆಯನೊಲ್ಲದೆ ಬಿಟ್ಟಿರುವ
ಬಿಯದರಿದರೊಳೊಪ್ಪಿಹರು.

**ಕಾವ:—** ಅಹಿಂಸೋ ಪರಮೋಧರ್ಮವೆಂದು ಸಾರುವಂತಿದೆ ಬೆಟ್ಟ

**ಬಸಂತ:—** ಕೇಳರಸ,
ಮಡುಗಳೊಳಗಲರ್ದ ಹೂವನು,
ಕಡು ನಲವಿಂ ಬೇಗನೆ ತಿರಿದು.
ಸವಣನ ಮೆಲ್ಲಡಿಗೆ, ತಲೆದುಡಿಗೆ ಮಾಡುವ,
ಪಿಡಿಗಳಿಹವೀ ತಳ್ಪಲ ಬನದಲ್ಲಿ.

ಕಾವ:— ಸವಣನಿರುತಿಹನೇ ಬೆಟ್ಟದೊಳು. (ದೂರ ಏನನ್ನೋ ನೋಡಿ)
ದಟ್ಟಡವಿಯ ಮಧ್ಯದೊಳು ಆ ಶಿಲಾಮೂರ್ತಿ ಏಕೆ
ನಿಂತಿಹುದು ನೋಡು ಬಸಂತ.

(ಬಸಂತನು ತೆರೆಯಲ್ಲಿ ಕೆರಳಿ ಮತ್ತು ಬರುವನು)

**ಬಸಂತ:—** ಶಿಲೆಯಲ್ಲ ಪ್ರಭು.
ಬಗೆ ನೊಸಲಲ್ಲಿ ಕೂದಿನಿಲೆ,
ತಪ್ಪದೆ ಮೂಗಿನ ಚೌಕದಲ್ಲಿ ದಿಟ್ಟಿಗಳಿರೆ,
ಮೆಯ್ಯು ಮಣ್ಣು ಕೊರಳಿಗೆ ಪುತ್ತಿಡೆ,
ಸುತ್ತಲು ಬಳ್ಳಿಗಳು ಹಬ್ಬಿರೆ,
ಸೊಗಯಿಸಿ ಕೈಯನಿಕ್ಕಿ ಮಿಗೆ,
ತನ್ನನೆ ತಾನೊಲವಿಂದೆ ಜಾನಿಸುತ
ನಿಂತಿರುವ ಸವಣನೋರ್ವ.

**ಕಾವ:—** (ಸಿಟ್ಟನೀದ) ಎನಗಿದಿರಾಗಿ ಮಲೆದು ಪೋಗದೆ
ನಿಲ್ಪ ತವಸಿಗಳನು ಕನಸಿನೊಳು ಕಂಡಿಲ್ಲ.

ಸವಣನೊರ್ವನೆ ತೊಲಗದೆ ನಿಂತಿಹನು.
ಇದಕೆ ತಕ್ಕುದದನೆ ಮಾಳ್ಪೆ.
(ಕರ್ವುವಿಲ್ಲನ್ನು ತೆಗೆದುಕೊಳ್ಳುವನು)

**ಬಸಂತ:—** ದೇವ ಸರಿಸಮರೊಡನೆ ಸೆಣಸುವರು ವೀರರು.
ಅಲ್ಲದೆ ಆರು ಹಗೆಗಳನು ಗೆದ್ದವಗೆ,
ಮೂಲೋಕ ಮಣಿದು ಬಾಳುವದು.

**ಕಾವ:—** ಮೂಲೋಕ ಮಣಿಯುವದು ನನೆವಿಲ್ಲನಿಗೆ.
ದಾರಿಬಿಡು. ಅಳಲು ಉರದೊಳು ಉಕ್ಕುತಿದೆ.

**ಬಸಂತ:—** ದೇವ ಮನ್ನಿಸು.
ಉರದಳಲಿಂದ ಆ ತವಸಿಯನು ಮುಳಿದೆಚ್ಚೊಡೆ,
ಕರ್ವುವಿಲ್ಲು ಮುರಿಯದೆ, ಪೂವಿನಂಬು ಕರಿಕೇಳದೆ,
ತುಂಬಿಯನಾರಿ ಬೇಗದಿಂ ಹರಿಯದೆ, ಬಂದಮಾವು
ಬೀತೊರಗದೆ, ಗಂಡುಕೋಗಿಲೆಯ ಸೊರ್ಕಳ
ಸೋರದೆ. ಇವನನು ಕಿರುಕುಳನೆಂದೆಣಿಸದಿರು.
ಈಸವಣನ ರೂಪೇತರ ಮಾತು. ಗಂಡತನವನು
ತಿಸುಳಿಯೊಳು ತೋರು.

**ಕಾವ:—** (ಶಾಂತನಾಗಿ) ಮನ್ನಿಸಿದೆ ಬಸಂತ.
ತಿಸುಳಿಯನು ಗೆಲ್ವುದಕೆ ಮುಡಿಗಿಕ್ಕುವಂತೆ,
ನಿಡುಗೈಗಳನು ಮುಡಿಗಿಕ್ಕುವೆನು.

**ಬಸಂತ:—** ಬೀರರಿಗುಚಿತ ಮಾತಿದು ಪ್ರಭು.
ನಡೆಯಿರಿ ಪಡೆ ಸಮೀಪಿಸಿತು.

**ಕಾವ:—** (ತೆರೆಯತ್ತ ನೋಡಿ) ನಡೆ ಬಸಂತ.

( ಕಾವ ಬಸಂತರು ದೂರದಿಂದಲೇ ಸವಣನಿಗೆ ಮಣಿದು ತೆರೆಯತ್ತ ಹೋಗುವರು. ತೆರೆಯಲ್ಲಿ ಪಡೆಯ ಚಲನೆಗನುಗುಣವಾದ ವಾದ್ಯಗಳು ಮೊಳಗುತ್ತಿರುವಾಗ )

ತೆರೆ

# ಶಿವನ ನೋಟ



( ಸ್ಥಳ:— ಮಂಜುವೆಟ್ಟ. ಅದರ ಸುತ್ತಲೆಲ್ಲ ಹೆಣಗಳ ಬಣವೆ ಒಟ್ಟಿದೆ. ಶಿವನ ಪಡೆಯು ದಿಕ್ಕೆಟ್ಟು ಓಡುತ್ತಿದೆ. ಬೆಟ್ಟದ ಮೇಲಿನ ಹಾಸುಗಲ್ಲ ಮೇಲೆ ಶಿವನು ಧ್ಯಾನಮಗ್ನನಾಗಿ ಕುಳಿತಿದ್ದಾನೆ. ಭಯದಿಂದ ಕಂಗೆಟ್ಟ ಇಬ್ಬರು ಸೈನಿಕರು ಮಾತನಾಡುತ್ತ ಬರುತ್ತಾರೆ. )

ಒಬ್ಬ:— ಕಾವನ ಕಡು ಬಲದಿಂದ ಪೊಡವಿ
ನಿಲಲಾರದೆ ಒಲಿದಂತಿದೆ. ನಮ್ಮ
ಉರ್ಕಡಿಗಳು ಕಾಳಗದ ಕಣದಲ್ಲಿ
ದೀರ್ಘ ನಿದ್ರೆಯಿಂದ ಮಲಗಿದರು.

ಇನ್ನೊಬ್ಬ:—ಅದೋ ನಡೆದಿದೆ ಮುರಿದ ತೇರ್ಗಳ ಸಂತೆ.
ಓಡುತಿವೆ ಸೊಂಡಿಲುವರಿದ ಆನೆಗಳು ದಿಕ್ಕೆಟ್ಟು.
ಆನೆಗಳ ತಲೆಯ ಮುತ್ತುಗಳು ಸುತ್ತಲು ಸಿಡಿದಿವೆ.
ಗಾಯಾಳುಗಳ ನರಳಾಟ ನಿರಂತರವಾಗಿ ನಡೆದಿದೆ.

ಒಬ್ಬ:— ಕಾಳಗದ ಕಣದಲ್ಲಿ ಮರುಳುಗಳ ಮದುವೆ
ವಿಜೃಂಭಣೆಯಿಂದ ಸಾಗಿಹುದು ನೋಡು.

ಇನ್ನೊಬ್ಬ:—ಪಡೆಮಡಿದರೂ ಒಡೆಯುಲೊಲ್ಲದು ಒಡೆಯನ
ಆ ಅತಿ ದೀರ್ಘ ಯೋಗ ಮಾಯೆ.
ಅದೋ ಬೆಟ್ಟದಾ ಬಯಲಿನಲಿ ಶಿಲಾಸನದ ಮೇಲೆ
ಹೊಳೆಯುತಿಹ ರತ್ನ ಕುಳಿತಿದೆ.
ಅದೋ ಭಯಂಕರ ತೇಜವಾವರಿಸುತಿದೆ.
ನಮ್ಮೊಡೆಯನ ಯೋಗ ಮುಗಿಯುವಂತಿದೆ.

ಒಬ್ಬ:— ಕಾಳಗದ ಕೊನೆಯ ಅಂಕದಲೀಗ ಎಚ್ಚತ್ತರೇನಂತೆ !
ಅದೋ ಮೀನಾಂಕ ಬರುತಿಹನು ನೋಡಲ್ಲಿ.
ಗಿಳಿಗಳೆಂಬಾ ಕುದುರೆಗಳು ಕಡುಪಿನಿಂ

ತೇರನೆಳೆಯುತ್ತ ಒನಪಿನಿಂ ಧಾವಿಸುತಿವೆ.
ಅಳಿದುಳಿದ ಸೈನ್ಯವನು ಸಜ್ಜುಗೊಳಿಸೋಣ.
ನಡೆ ಬೇಗ ಇಲ್ಲಿಂದ. (ಹೋಗುವರು.)

( ಕಾವನು ತೇರಿನಲ್ಲಿ ಕುಳಿತು ಸಿವನೆಡೆಗೆ ಬರುತ್ತಾನೆ.)

ಕಾವ:— ಓ ಬಡ ಗೊರವ, ಕಡುಪಿಂ ನನ್ನ
ಪೂವಿನ ಕೋಲುಗಳು ಮುಂಬರಿದು
ಗಡಣಿಸುತ ಕವಿತಂದು ನಾಂಟುವಾಗಳೆ
ನಿನ್ನ ಈ ಜಡೆ ತೊವಲುಗಳುಡಿಗೆ
ಸುಳಿದಾಡುವ ಪಾವಿನ ತೊಡುಗೆ,
ಅಡ್ಡಬಂದು ನಿನ್ನನುಳಿಸುವವೆ ಮರುಳೆ?
ನಿನ್ನ ಬಳ್ವಿನ ಪಡೆಯೆಲ್ಲ ಮಲಗಿಹುದು
ಮಹಾನಿದ್ರೆಯಲಿ ಕಾಳಗದ ಕಣದಲ್ಲಿ.
ಪೆರೆಯು ಮರಳ್ಚುವಡೆ ಜೀವದಲಿ ನಿನ್ನಬಿಡುವೆ.

( ಸಿವನು ಮಿಸುಕಾಡದಿರುವದನ್ನು ಕಂಡು )

ಓ ಮರುಳೆ ಕಣ್ದೆರೆದು ಜಗವ ನೋಡು.
ಕಣ್ಮುಚ್ಚಿ ಹಾಲನೀಂಟುವಡೆ ಬೆಕ್ಕು
ಜಗತನ್ನ ನೋಡದೆಂಬಂತೆ ಇರುವಿಯೇನು. ?
ನಾನರಿವೆ, ಜೀವಗಳ್ಪನ ತೆರದಿ ನೀನೀಗ
ಸೋಗ ಮೆರೆಸುವಡೆ ಕಾವ ಕೇಳುವನೆ.
ಧೈರ್ಯವಿದ್ದೊಡೆ ಉರ್ಕಿನಿಂದಲಿ
ಕೈದುಗಳ ಕೈಕೊಂಡು ಕಾಳಗಕೆ ಕೈಗೊಡು.
(ಸಿವನು ಸುಮ್ಮನಿದ್ದದ್ದನ್ನು ಕಂಡು)

ಎಲವೋ ಭೂತಗಳರಸ ನನಗಣೆಯು
ನಿನ್ನೆದುರು ಭೈರವಾಕಾರದಲಿರುವ ನೋಡು.
ಮೈಮರೆತು ಕುಳಿತರೆ ಕಟ್ಟಿಹುದು ಕೇಡು.

ಇದುವೇ ನಿನ್ನ ಕೊನೆಯ ಗಳಿಗೆಯಾಗುವದು,
ಮೇಲೇಳು ವೀರವರನಂತೆ ಕಾದು.

( ಸಿವನಃ ಸುಮ್ಮನಿರುವದನ್ನು ಕಂಡು ಕಾವನು ಕನಲಿ ಬಿಲ್ಲನ್ನು ತೆಗೆದು ಕೊಂಡು ಝೇಂಕರಿಸುತ್ತ )

ಎಲೆ ಮರುಳೆ ಕರಗುತಿದೆ ಮಂಜುವೆಟ್ಟ.
ಬಿಸುಗದಿರನ ಕಿರಣ ಕಣ್ಣಾಗುತಿವೆ.
ನಾಲ್ಕು ದೆಶೆಗಳೊಳು ಮುತ್ತುವವು ನನ್ನೀ
ನನೆಗಣೆಗಳು ನೀನ್ನ ನೀಗಲೆನೋಡು.
ನನ್ನ ನನೆಗಣೆ ಕೇಳ್ಮರುಳೆ, ಮುಗಿಲೆಡೆಯಲ್ಲಿ
ಬಂದು ಸುಳಿದಾಡುವ ಪೆಂಡಿರ ಕಣ್ಣ ಬೆಳ್ಪೊ
ತಾರಗೆಗಳ ನೀಳ್ದ ನುಣ್ಪೊಳಗೋ,
ಮಿಂಚಿನ ಗೊಂಚಲೋ, ಹಾದಿಗೆಟ್ಟು ತೊಟ್ಟಿಗೆ
ನೆಗೆತರ್ಪ ನುಣ್ಣದಿರೋ ಎಂಬೆನೆ
ಮುತ್ತುವವು ಮೇಲ್ವರಿದು ನಿನ್ನ.

( ಕಾವನು ಹೂಬಾಣಗಳ ಮಳೆಗರಯುವನು. ಅವು ಸಿವನ ಅಂಗಾಂಗ ಗಳನ್ನು ಮುತ್ತುವವು. ಕೋಗಿಲೆಗಳು ಕೂಗ ತೊಡಗುವವು. ಕಾವನು ಬಾಣ ಗಳನ್ನು ಬಿಡುತ್ತಲೇ ಇರುತ್ತಾನೆ. ಸಿವನ ಮೈ ಮೆಲ್ಲನೆ ಅಲುಗಾಡತೊಡಗುತ್ತದೆ. ಸ್ವಲ್ಪ ಹೊತ್ತಿನ ಮೇಲೆ ಭಯಂಕರ ಸದ್ದಾಗುವದು., ಸಿವನ ಮುಗುಳ್ನಗೆ ಮಾಯ ವಾಗಿ ರುದ್ರ ಕಳೆತುಂಬುವದು. ಬಾಣಗಳ ಮಳೆ ಸಾವಕಾಶ ನಿಲ್ಲುತ್ತ ಬರುವದು ಸಿವನು ಸಾವಕಾಶ ಕಣ್ದೆರೆದು ಕಾವನನ್ನ ನೋಡುವನು. )

**ಕಾವ:—** ಕಾವನ ನನೆಗಣೆಯ ಮುಂದೆ ನಿಲ್ವದೇ ಸಮಾಧಿ ?
ಕೈದುಗಳ ಧರಿಸಿ ಆಳ್ತನದಿಂದ ಕಾದು.

**ಸಿವ:—** ( ಸಿಟ್ಟಿನಿಂದ ) ಹಿರಿಯರೆಂಬುದಂ ಲೆಕ್ಕಿಸದೆ,
ನನ್ನೊಳು ಕಾದಿದೆ. ಅಂತದರಿಂದ ನಿನ್ನ
ಮನದನ್ನೆಯಂ ತೊರೆದು, ಕಾವನೆಂಬುದಂ
ಮರೆದು, ಕೆಲಕಾಲ ಬಾಳು.

**ಕಾವ:—** ವೀರನಂತೆ ಕಾದುವದಂ ಮರೆದು,
ಹೇಡಿಯಂತೆ ನಾಚಿಕೆಯಂ ತೊರೆದು,
ಶಾಪವನಿತ್ತೆಯಲ್ಲಿವೆ ಬಡಗೊರವ?
ನಿನ್ನ ಉರ್ಕಿನ ಬಾಳು ಬರಿದಾಯಿತೆ ?
ಸಿವಗೆ ಸೋಲೊದಗಿತೆ.

( ಸುತ್ತಲು “ ಸಿವನ ಸೋಲು ” ಎಂಬ ಧ್ವನಿಯು ಕೇಳಬರುತ್ತದೆ. ಸಿವನು ಸಿಟ್ಟಿನಿಂದ ಘರ್ಜಿಸುವನು. ಒಮ್ಮೆಲೆ ಕತ್ತಲೆಗವಿಯುವದು. ರುದ್ರ ನಾದವು ಹೊರಡ ತೊಡಗುವದು. ಕೆಲವು ಸಮಯದ ಮೇಲೆ ಬೆಳಕು ಬೀಳುವದು. ಆಗ ಸಿವನು ಅರೆವೆಣ್ಣಾಗಿರ್ದುದು ಕಂಡು ಬರುವದು. ವೀರಾಸನ ಹಾಕಿ ಕುಳಿತ ಅವನು ತನ್ನಷ್ಟಕ್ಕೆ “ ಸಿವನಿಗೆ ಸೋಲೆ ” ? ಎಂದು ಕಣ್ಮುಚ್ಚಿ ಪುನಃ ಧ್ಯಾನ ಮಗ್ನನಾಗುವನು. )

—:( ತೆರೆ ಸರಿಯುವದು ):—

# ೬ನೆಯ ನೋಟ



( ಇಚ್ಛೆಗಾರ್ತಿಯು ದೇವರ ಮನೆಯಲ್ಲಿ ಭುವನೇಶ್ವರಿಯ ಮೂರ್ತಿಯನ್ನು ಪೂಜಿಸುತ್ತ ಕುಳಿತಿದ್ದಾಳೆ. ಸಖಿಯೊಬ್ಬಳು ಹಾರವನ್ನು ಕಟ್ಟುತ್ತಿದ್ದಾಳೆ.)

**ಇಚ್ಛೆಗಾರ್ತಿ:**—ಕೆಳದೀ ಆ ಹಾರವನು ಇಲ್ಲಿ ತಾ.

**ಸಖಿ:**— ಮಹಾರಾಣಿಯವರ ಆಣತಿ. ( ಹಾರವನ್ನು ಕೊಟ್ಟು ಹೋಗುವಳು. )

**ಇಚ್ಛೆಗಾರ್ತಿ:**— (ಹಾರವನ್ನು ಕೈಯಲ್ಲಿ ಹಿಡಿದು)

ಕಳವಳದಿಂದ ತತ್ತರಿಸುತಿದೆ ನನ್ನೆದೆ.
ಅವ್ಯಕ್ತ ಧ್ವನಿಯೊಂದು ಹೊರಹೊಮ್ಮುತಿದೆ.
ಜಗದ ಮಾತೆಯೆ, ಭುವನ ಮೋಹಿನಿಯೆ,
ಓ ತಾಯೆ, ಭುವನೇಶ್ವರಿ ನೀ ಕಾಯೆ.
ಕರುಣೆಯಲಿ ಕಾದಲನಿಗೆ ಗೆಲುವನೀಯೆ.
ಹೊಸಹಾರದಲಿ ನಿನ್ನ ಮನಕನುಗುಣವಾಗಿ,
ನನ್ನೆದೆಯ ನೇಹದ ದೀಪವನೆ ಬೆಳಗಿ,
ನಿನ್ನ ಮನರಂಜಿಸುವ ಕಾಣಿಕೆಯನಿತ್ತು,
ಎಡೆವಿಡದೆ ಪೊರಮಡುವೆ ತಾಯೆ.

( ಹಾರವನ್ನು ಹಾಕಿ ನಮಿಸುವಳು. ಸಖಿಯು ತಂದ ಮಂಗಳಾರತಿಯ ತಟ್ಟೆಯನ್ನು ತೆಗೆದುಕೊಂಡು)

ಜಯವೆಂದು ಬೆಳಗುವೆ ಜಗದ ಮಹಮಾಯೆ.
ನಿನ್ನ ನಗೆಯಲಿ ಜಗವು ನಗುತ ನಿಂತಿಹುದು,
ಗಿರಿಕಾಡು ನಗರಗಳ್ ಓಂಕಾರದಿಂ ತುಂಬಿ,
ಅಮರಗೀತೆಯನಿಂದು ನಿರಂತರ ಹಾಡುವವು.

ಮಂಜುಮೆಟ್ಟದಲೆನ್ನ ಪ್ರಾಣ ನಿಂತಿಹುದು.
ಮಗಳ ಮಾಂಗಲ್ಯವನು ಬಿಡದೆ ಕಾಯುವದು.

( ಮಂಗಳಾರತಿಯನ್ನು ಬೆಳಗಿ ನಮಸ್ಕರಿಸುತ್ತಿರುವಾಗ ದಾಸಿಯೊಬ್ಬಳು ಬಂದು ಮಣಿದು)

**ದಾಸಿ:—** ಎನ್ನೊಡತಿ ಬಾಗಿಲಲಿ ಬಸಂತ ಮಹಾಪ್ರಧಾನರು
ಕಾಯುತಲಿಹರು.

**ಇಚ್ಛೆಗಾತಿ:—** (ಗಾಬರಿಯಾಗಿ) ಬರಹೇಳು. (ದಾಸಿಯು ಹೊರಟುಹೋದನಂತರ ದೇವಿಯತ್ತ ತಿರುಗಿ.)
ಭುವನೇಶ್ವರಿ, ನನ್ನ ಮಾತೆ, ನೀನೆನ್ನ ಕಾಯುವದು.
ಬಸಂತನ ಬರವು ಅದಾವುದೋ ಸಂಕಟವ ತರುವದು.
ಎನ್ನೊಡೆಯನನ್ನುಳಿದು ಬಸಂತನೇಕೆ ಬಂದಿಹನು ?
ತಾಳು ತಾಳೆಲೆ ಮನವೆ, ತಾಳದಾ ಹೃದಯವನು.

( ಬಸಂತನು ಬಂದು ಇಚ್ಛೆಗಾತಿಗೆ ನಮಸ್ಕರಿಸಿ ನಿಲ್ಲುವನು.)

ಮಹಾಪ್ರಧಾನರೆ ನನ್ನ ದೊರೆಯೆಲ್ಲಿ ?
ಹೇಳಿ ಬೇಗನೆ ಹೇಳಿ, ಕಾಳಗದ
ವಾರ್ತೆಯನು ಕೇಳಲೆಳಿಸುವೆನು.

**ಬಸಂತ:—** ದೇವಿಯವರೆ ....... ...(ನಿಲ್ಲುವನು)

**ಇಚ್ಛೆಗಾತಿ:—** (ಸ್ವಗತ) ದೊರೆತನ್ನ ಬರುವ ತಿಳಿಸಲೊಡೆ
ಆಳುಗಳ ನಟ್ಟಬಹುದಾಗಿತ್ತು. ಇವರ
ಆಗಮನ ಸಂಕಟವ ತರುವಂತಿದೆ.
(ಪ್ರಕಾಶ) ಹೇಳಿ ಅಮಾತ್ಯರೆ, ಜಯತಾನೆ ?

**ಬಸಂತ:—** ಅಹುದು ತಾಯಿ. ಆದರೆ.........

**ಇಚ್ಛೆಗಾತಿ:—** (ಆನಂದದಿಂದ)
ನನ್ನೊಡೆಯನನು ಸ್ವಾಗತಿಸಲೆಂದು,
ತೋರಮುತ್ತುಗಳ ಮಾಲೆಯನು ಕಟ್ಟುವೆನು.
ನನ್ನೆದೆಯೊಲವಿನ ಪ್ರೇಮದಾರತಿಯನೆತ್ತುವೆನು.

ಅಮಾತ್ಯರೆ ನಡುವೆ ಆದರೆ.......ಏಕೆ ?
ನನ್ನಿನಿಯ ಪುರವಳಿಯುದಲಿ ಬೀಡು ಬಿಟ್ಟಿಹನೆ ?

**ಬಸಂತ:—** ಅಹುದು ಮಹಾರಾಣಿಯುವರೆ, ಬರಲು
ತಡವಾಗಬಹುದು.

**ಇಚ್ಛೆಗಾತೀ:—**ಅರಿಗಳ ರಾಜ್ಯವನು ಕೈವಶಮಾಡಿಕೊಂಡು,
ಅದರ ವ್ಯವಸ್ಥೆಗಾಗಿ ನಿಂತಿಹರೆ ಹೇಳಿ,
ಅಮಾತ್ಯರೆ ಆನಂದದಲಿ ಬಿರಿಯುತಿದೆ
ನನ್ನೆದೆಯು, ವೀರವರನ ಮುಡದಿನಾನೆಂದು.
ಅಕ್ಷತಿಯನಿಟ್ಟು, ಆರತಿಯನೆತ್ತಲವರನೇಕೆ
ತೊರೆದು, ನೀವೊಬ್ಬರೇ ಬಂದಿರಿ.

**ಬಸಂತ:—** (ಸ್ವಗತ) ಮಹರಾಣಿ ಎಂತು ಸೈರಿಸುವಳೋ
ಈ ದಾರುಣ ವಾರ್ತೆಯನ್ನು, (ಪ್ರಕಾಶ)
ತಾಯೀ ಮಹರಾಜರನ್ನಳಿದು ನೀವು
ಕೆಲವು ಕಾಲ ಬಾಳಬೇಕಾಗುವದು.

**ಇಚ್ಛೆಗಾತೀ:—** (ಕಳವಳದಿಂದ) ಏಕೆ ?

**ಬಸಂತ:—** ಮಹರಾಜ ಕೆಲಕಾಲ ಮರೆಯಾಗಿ ಇಹನು
ಆಡಳಿತೆಯನು ನೀವೇ ವಹಿಸಿ.

**ಇಚ್ಛೆಗಾತೀ:—**ಹೇಳಿ ಅಮಾತ್ಯರೇ ನಿಜಹೇಳಿ,
ನನ್ನೊಡೆಯನೆಲ್ಲಿಹನು.

**ಬಸಂತ:—** ಸೈರಿಸಬೇಕು ಮಹತಾಯಿ. ನನ್ನೊಡೆಯ ಗೆದ್ದು
ಬಾಳಿದನು. ಸಿವನು ಸೋತು ಬಾಳುವನು
ಕೆಲಕಾಲ.

**ಇಚ್ಛೆಗಾತೀ:—**ಅದಿರಲಿ ಅಮಾತ್ಯರೆ, ಆದಾವುದೋ
ಅಭೇದ್ಯವಾದ ವಿಚಾರ ಕೋಟೆಗಳ
ಮಧ್ಯದಲೇಕೆ ನುಗ್ಗಲಿಳಿಸುವಿರಿ. ಹೇಳಿ

ನನ್ನ ಮನದನ್ನನೆಲ್ಲಿಹನು. ನಿಂತಿಹನೆ
ವೈರಿಗಳ ದೇಶದಲಿ ಶಾಂತಿಯನೆಲಿಸಲೆಂದು.

**ಬಸಂತ:—** ಮಹರಾಣಿಯವರೆ ಬಡಗೊರವ ಸೋಲನರಿತು
ಶಾಪವನಿತ್ತನು.

**ಇಚ್ಛೆಗಾರ್ತಿ:—** ( ತಿರಿಸ್ಕಾರದಿಂದ ) ಕಜ್ಜವಿಮುಖರ ಕೆಲಸವಿದು.
ಯಾರಿಗೆ ಶಾಪವನಿತ್ತನು.

**ಬಸಂತ:—** ( ಮೆಲ್ಲನೆ ) ಅರಿಭಯಂಕರ ನಮ್ಮೊಡೆಯನಿಗೆ.

**ಇಚ್ಛೆಗಾರ್ತಿ:—** (ಕಳವಳದಿಂದ) ಏನೆಂದು

**ಬಸಂತ:—** ಹಿರಿಯರೆಂಬುದಂ ಲೆಕ್ಕಿಸದೆ, ನಮ್ಮೊಳು ಕಾದಿದೆ.
ಅಂತದರಿಂದ ನಿನ್ನ ಮನದನ್ನೆಯಂ ತೊರೆದು,
ಕಾವನೆಂಬುದಂ ಮರೆದು, ಕೆಲಕಾಲ ಬಾಳೆಂದು.

( ಇಚ್ಛೆಗಾರ್ತಿ ಒಮ್ಮೆಲೆ ಅಯ್ಯೋ ಎಂದು ಚೀರಿ ನೆಲಕ್ಕುರುಳುವಳು. ದಾಸಿಯರು ಉಪಚರಿಸುತ್ತಿರುವರು. ಬಸಂತನು " ಮಹರಾಣಿಯವರು ಧೈರ್ಯ ಹೊಂದಬೇಕು " ಎನ್ನುತ್ತಿರುವನು. ಸ್ವಲ್ಪ ಸಮಯದ ನಂತರ ಇಚ್ಛೆಗಾರ್ತಿಯು ಕಣ್ದೆರೆದು,)

**ಇಚ್ಛೆಗಾರ್ತಿ:—** ವಿರಹ ದುಃಖವನರಿತಿಹನೆ ಗೊರವ.
ಓ ಎನ್ನ ಮನದನ್ನ ಎಲ್ಲಿ ನೀನಿರುವೆ.
ಮರೆಯಾಗುವಾಗ ನೆನೆದೆಯಾ ನಿನ್ನವಳ.
ಅಯ್ಯೋ ಸಂಕಟದ ಕಡಲೆ ಕುದಿಯುತಿದೆ
ನನ್ನೆದೆಯಲಿ. ನಾನಿನ್ನ ಮರೆದೆಂತು
ಬಾಳಲಿ ಹೇಳು ಇಚ್ಛೆಗಾರ್ತಿಯ ಅರಸ
ನಿನ್ನನಗಲಿದ ದಿನವೊಂದು ಕಲ್ಪವಾಗಿಹುದು

(ತನ್ನ ಮೈ ನೋಡಿಕೊಂಡು ಅಳುತ್ತ)

ಈ ಸಿರಿಗಂಧವನ್ನೇಕೆ ತೊಡೆದಿಹಿರಿ.
ಸಿರಿಗಂಧ ನನ್ನೆದೆಯ ಅಳಲನಾರಿಸುವದೇ ?

ತಂಗಾಳಿ ನೀನೇಕೆ ಬಿಸಿಯಾಗಿ ಬೀಸುತಿಹೆ.
ನಿನ್ನೊಡೆಯ ನಿಲ್ಲವೆಂದು ಕೊರಗುತಿಹೆಯಾ.

( ಭುವನೇಶ್ವರಿಯ ಮೂರ್ತಿಯತ್ತ ತಿರುಗಿ ದೀನಸ್ವರದಿಂದ )

ಹೇಳು ತಾಯಿ, ನನ್ನೊಡೆಯನೆಲ್ಲಿ ಅಡಗಿಹನು.
( ಉನ್ಮತ್ತಳಂತೆ ನಗುತ್ತ ) ನೀರೆಯರ ಬಲ್ಲಹನೆ,
ನಿನೇಕಿಲ್ಲಿ ಅಡಗಿರುವೆ ? ಮಡದಿಯನು
ವಂಚಿಸಲೆಂದೇ ( ಪೂಜೆಮಾಡಿದ ಹೂಗಳನ್ನೆತ್ತಿ ಎದೆಗೆ ಅವಚಿಕೊಳ್ಳುವಳು. )
ಹೊಂದಿದೆನು ನನ್ನಿನಿಯನನು ಮತ್ತೆ. ಆನಂದ
ಇದುವೆ ಆನಂದ, ಪರಮಾನಂದ.
( ಅರಿವಾಗಿ ) ಎಲವೆ ನೀ ಹೂವಲ್ತೆ.
( ದಿಟ್ಟಿಸಿನೋಡಿ ) ನೀನೇಕೆ ಬಾಡಿದೆ ಹೇಳು ?
ನೀನರಿವೆಯಾ ನನ್ನಿನಿಯನಿರುವನ್ನು.
(ಸುತ್ತ ಅಷ್ಟಿ) ಹೇಳು ಬೇಗ ಹೇಳು.

( ಭುವನೇಶ್ವರಿಯತ್ತ ತಿರುಗಿ )

ಹೇಳು ತಾಯೀ ನನ್ನ ಮಾಂಗಲ್ಯ ಸೂತ್ರವೆಲ್ಲಿಹುದು.
ಬೇಗ ಹೇಳು.

( ಶಕ್ತಿ ಮೂರ್ಛೆಹೋಗುವಳು. ದಾಸಿಯರು ಉಪಚರಿಸುತ್ತಿರುವರು.)

ಬಸಂತ:— ಧೈರ್ಯವನು ತಂದು ರಾಜ್ಯಸೂತ್ರಗಳ ಕೈಕೊಳ್ಳಿ
ಮಹಾರಾಣಿಯವರೆ ....... ...

— ತೆರೆ —

# ೭ನೆಯ ನೋಟ



( ಬೆಟ್ಟದ ತುದಿಯ ಮೇಲೆ ಇಬ್ಬರು ಮಾತಾಡುತ್ತಿರುವರು )

**೧ನೆಯವ:**—ಬೆಟ್ಟದಾ ತುದಿಯಲ್ಲಿ ನಿಂತು ನೋಡುವಡೆ
ಕೆಳಗಿನಾ ಹೆಮ್ಮರವೆನಿತು ಕಿರಿದಾಗಿ ಕಾಣುತಿದೆ.
ಅಂತೆಯೇ ಮಾನವನ ಜೀವನವೆನಿತು ಕಿರಿದು.
ಕಿರಿದುದರಲಿ ಹಿರಿದುದನು ಕಾಣುವವನೆ ಮಾನವ.

**೨ನೆಯವ:**—(ನಕ್ಕು) ತತ್ವಗಳನತ್ತ ಕಟ್ಟಿಡು. ಇದು ನೋಡು,
ಹಲವಾರು ವರುಷಗಳು ಸುತ್ತಿದೆವು
ಹಳ್ಳಿಪಟ್ಟಣ ಗಿರಿ ಕಂದರಗಳನು.
ಅರಿಯದಾಯಿತು ಒಡೆಯನಿರುವೆಡೆಗೆ
ಮಹರಾಣಿಗೆಂತು ಪೊಗದೋರುವದೋ ನಾನರಿಯೆ.
ನಮ್ಮ ಬರುವನೀಕ್ಷಿಸುತ ಆಸೆಯ ಸೌಧಗಳ
ನಿರ್ಮಿಸುತ ಕುಳಿತಿಹಳು ಆ ತಾಯಿ.
ಕಾವನಿರುವನರಿಯದಿರ್ದೊಡೆ ಬದುಕುವಳೆಂತೊ
ನಾನರಿಯೆ.

**೧ನೆಯವ:**—ಸುತ್ತಲೂ ಪರಿಚಾರಕರು ತೆರಳಿಹರು.
ಎನ್ನ ಮನವರುಹುತಿದೆ ಸಫಲರಾಗುವಿರೆಂದು.

**೨ನೆಯವ:**—ನೋಡಲ್ಲಿ ಹೊಗೆಯೇಳುತಿರ್ಪಲ್ಲಿ
ಜನವಸತಿ ಇರುವಂತೆ ತೋರುತಿದೆ.

**೧ನೆಯವ:**—ಅಹುದು. ಅಲ್ಲಿಗೆ ತೆರಳಿ ಅರಸೋಣ. (ಹೋಗುವರು)

—ತೆರೆ—

# ೮ನೆಯ ನೋಟ



( ಕಾವನ ಒಲಗ ಸಿಂಹಾಸನದ ಮೇಲೆ ಕಾವನ ಪ್ರತಿಮೆಯು ಸ್ಥಾಪಿಸಲ್ಪಟ್ಟಿದೆ. ಅದರ ಹತ್ತಿರ ಇಚ್ಛೆಗಾರ್ತಿಯು ಕುಳಿತಿರುವಳು. ಎಲ್ಲಾ ಸರದಾರರೂ ಸಭಿಕರೂ ತಮ್ಮ ತಮ್ಮ ಸ್ಥಳದಲ್ಲಿ ಕುಳಿತಿದ್ದಾರೆ. ಬಸಂತನು ಮುಖ್ಯ ಮಂತ್ರಿಯ ಆಸ್ಥಾನದಲ್ಲಿ ಕುಳಿತಿರುವಾಗ ತೆರೆ ಏಳುವದು.)

**ಇಚ್ಛೆಗಾರ್ತಿ:**—ಮಂತ್ರಿಗಳೇ ಅದೆಷ್ಟುದಿನ ಮನದನ್ನನನ್ನಗಲಿ
ಒಲಗವ ನಡೆಯಿಸಲಿ.

**ಬಂಸತ:**—( ವಿನಯದಿಂದ ಎದ್ದು ನಮಸ್ಕರಿಸಿ )
ಮಹಾರಾಣಿಯವರೆ ಕೊರಗದಿರಿ.
ಭುವನೇಶ್ವರಿಯ ಅನುಗ್ರಹದಿಂದ ನಮ್ಮೊಡೆಯನನು
ಬೇಗನೆ ಕಾಣುವೆವು.

**ಇಚ್ಛೆಗಾರ್ತಿ:**—ಅದೆಷ್ಟು ವರುಷಗಳು ಕಳೆದವು ಬಲ್ಲಿರಾ !
ನನ್ನೆದೆಯ ಕಾಳರಾತ್ರಿಯ ತಿಂಗಳನೆಂದು
ಬರುವನೋ ಎಂದು ಕಾಯುತಿದೆ ಮನವು.

( ಸೇವಕನೊಬ್ಬನು ಬಂದು ನಮಸ್ಕರಿಸಿ )

**ಸೇವಕ:**— ಮಹಾರಾಣಿಯವರೆ, ಕನ್ನಡವಕ್ಕಿ ಬಾಗಿಲಲ್ಲಿ
ಕಾದಿಹನು.

**ಇಚ್ಛೆಗಾರ್ತಿ:**—ಬರಹೇಳು.

**ಕನ್ನಡವಕ್ಕಿ:**—( ಬಂದು ನಮಸ್ಕರಿಸಿ ) ಮಹರಾಣಿಯವರಿಗೆ
ಪ್ರಿಯವಾದ ನುಡಿಯನರುಹುವೆನು.

**ಇಚ್ಛೆಗಾರ್ತಿ:**—ಹೇಳು ಕನ್ನಡವಕ್ಕಿ ನನ್ನೊಡೆಯನಿರುವ
ನೆಲೆಯನೇನಾದರೂ ಬಲ್ಲೆಯಾ ಬೇಗ ಹೇಳು.

**ಕನ್ನಡವಕ್ಕಿ:**—ಮಹರಾಣಿ ನಮ್ಮೊಡೆಯ ಪೂವಿನ
ಪೊಳಲೆಂಬ ಪಟ್ಟಣದಲ್ಲಿ ನನೆಯೆಂಬ

ಅರಸನಾಗಿ ಆಳುತಲಿದ್ದನು. ಒಂದು ದಿನ ರಾಯ
ಕನಸಿನೊಳು ಲಲನೆಯೊರ್ವಳ ಕಂಡು ,
ಮುನ್ನವಳ ನೋಡಿದಂತಿದೆ ಯೆಂದು
ಹೇಳಿದನು ತನ್ನ ಗೆಳೆಯ ನಗೆಗಾರನಿಗೆ. ಅರಸ
ಬೇಜರದಿಂದ ಅರಮನೆಯ ಚಿತ್ರಶಾಲೆಯುಲಿರುವ
ಬನದ ಚಿತ್ರವನು ನೋಡುತಿರುವಾಗ ನಗೆಗಾರ
ಹೇಳಿದನು, ಅರಮನೆಯ ನಿಜ ಬನವ
ನೋಡೋಣವೆಂದು. ಶುಭಕಾಲಕನುಗುಣವಾಗಿ
ತೋಟಿಗನು ಬಂದು ದೊರೆಗೆರಗಿ ಕಾಣಿಕೆಯನಿತ್ತು
ಬಿನ್ನವಿಸಿದನು, ಬನವ ನೋಡುವದೆಂದು. ತನ್ನ
ರಾಣಿಯುರನೊಡಗೂಡಿ ಬಿನದದಿಂದ ಬನವನು
ಸುತ್ತುತಿರುವಾಗ, ಕನಸಿನ ಕನ್ಯೆಯನು ಕಂಡು,
ನೀನಾರು ಸಗ್ಗ ಸುಂದರಿಯೆಂದು ಮರ್ಯಾದೆಯಿಂ
ನುಡಿಸಿದನು. ಆ ರಮಣಿ ತನ್ನ ಮಧುರ
ವಾಣಿಯಿಂದರುಹಿದಳು ನನೆ ಮಹರಾಜರಿಗೆ.
"ಎಲೆ ಅರಸೆ, ನೀ ನಿನ್ನ ನಿಜರೂಪವಂ ಮರೆದು,
ಶಾಪದಿಂ ಇಲ್ಲಿ ಜನಿಸಿರುವೆ, ನೀನಿರುವೆ
ಕಾವ ನಿನ್ನ ಮನದನ್ನೆ ಕೊರಗುತಿಹಳಲ್ಲಿ" ಎಂದು
ನಿಮ್ಮ ಅವಸ್ಥೆಯಂ ಬಣ್ಣಿಸಿದಳು. ತೋಟದ
ಗಿಡಮರಗಳೆಲ್ಲ ನಿನ್ನ ಪಡೆ, ಪರಿಚಾರಕರೆಂದುಸಿರಿ
ಹಾರಿದಳು. ಕೂಡಲೇ ನಮ್ಮೊಡೆಯ
ನಿಜವೇಷವನು ತಾಳಿದನು. ಬನವೆಲ್ಲ ಪಡೆಯಾಯಿತ್ತು,
ನಿಮ್ಮ ಮನವಿರುವ ಕೇಳಿ ಕೊರಗಿ ನನ್ನನಟ್ಟಿದನು
ನಿಜವನರುಹಲೆಂದು.

**ಇಚ್ಛೆಗಾರ್ತಿ:**—ನನ್ನ ಭಾಗ್ಯ ಲಭಿಸಿತು. ( ಆನಂದದಿಂದ ಕಾವನಮೂರ್ತಿಗೆ ನಮಸ್ಕರಿಸುವಳು )

**ಬಸಂತ:**— ತಳಾರ,

**ತಳಾರ:**— ಮಹಾಪ್ರಭು.

**ಬಸಂತ:**— ಮುಕ್ಕಣ್ಣನನು ಗೆದ್ದು ದೊರೆ ಬರುತಿಹನು,
ಎಲ್ಲರೂ ನಗರವನು ಸಿಂಗರಿಸಿ ದೊರೆಯನು
ಎದುರ್ಗೊಳ್ಳಬೇಕೆಂದು ಸಾರು.

**ತಳಾರ:**— ಅಪ್ಪಣೆ

**ಬಸಂತ:**—ಮಹರಾಣಿಯವರೆ ಏಳಿ ಸಂಜೆಯೊಳು
ನಮ್ಮ ರಾಯನನ್ನೆದುರ್ಗೊಳ್ಳಲು ಸಿದ್ಧತೆಯ
ಮಾಡೋಣ.

( ತೆರೆಯ ಹಿಂದೆ ಡಂಗುರವನು ಸಾರುತ್ತಿರುವನು. ಸಾರುವ ಧ್ವನಿಯು ಅಡಗುತ್ತಿರುವಾಗ )

—ತೆರೆ—

## ೯ನೆಯ ನೋಟ



( ಮಹರಾಣಿಯು ದೇವರ ಮನೆಯಲ್ಲಿ ಭುವನೇಶ್ವರಿಯನ್ನು ಪೂಜಿಸುತ್ತಿರುವಾಗ ತೆರೆ ಏಳುವದು. )

ಇಚ್ಛೆಗಾತಿ:—ಕನ್ನಡಿಗರ ಕುಲದೇವತೆಯೆ ಕಣ್ದೆರೆದೆ.
ನನ್ನ ಮಂಗಳ ಸೂತ್ರವನು ತಿರುಗಿ ಎನಗಿತ್ತೆ.
ನಂಬಿದವರನು ಕೈಬಿಡೆ ನೆಂಬುದನು
ಜಗಕೆಲ್ಲ ಇಂದು ಸಾರಿದೆ ತಾಯಿ.

( ತೆರೆಯೊಳಗೆ ಮಂಗಳವಾದ್ಯಗಳು ಭೋರ್ಗರೆಯುತ್ತಿರುತ್ತವೆ. ಸಖಿಯೊಬ್ಬಳು ಬಂದು. )

ಸಖಿ:— ಮಹಾರಾಣಿ, ನಿನ್ನಿನಿಯ ಬರುತಿಹನು.

ಇಚ್ಛೆಗಾತಿ:—ಕರೆದು ತರುವದು ಅವರನಿಲ್ಲಿ,
ತಾಯಿಯ ಈ ದಿವ್ಯ ಸನ್ನಿಧಿಯಲ್ಲಿ.

( ಸಖಿಯು ಹೊರಟು ಹೋಗುವಳು. )

ಇಚ್ಛೆಗಾತಿ:—ಜಯ ಜಯವು ಓ ದೇವಿ
ಜಗದ ಮಹದೇವಿ. ನನ್ನ ನಾಡಿಗೆ
ದೈನ್ಯವೆಂದೆಂದಿಗೂ ಬರದಂತೆ,
ಪಜ್ವಳಿಪ ಭವಸ್ಯವನಿತ್ತು
ಹರಸುವದು ಓಂಕಾಳಿ.

( ಪರಿವಾರದಿಂದೊಡಗೂಡಿ ಕಾವನು ಬರುವನು. ಇಚ್ಛೆಗಾತ್ತಿಯು ಅವನಿಗೆ ನಮಸ್ಕರಿಸುತ್ತಾಳೆ. ಆನಂತರ ಎಲ್ಲರೂ ಭುವನೇಶ್ವರಿಗೆ ನಮಸ್ಕರಿಸುವರು. ತೆರೆಯೊಳಗೆ ಜಯಕಾರ ಧ್ವನಿಯು ಕೇಳಬರುತ್ತದೆ. )

ತೆರೆ ಸರಿಯುವದು

— ಮುಗಿದುದು —

# ಅಭಿಪ್ರಾಯ

ಶ್ರೀ. ಜಿ. ಎಂ. ಪಾಟೀಲರ ಇವೆರಡೂ ಕೃತಿಗಳನ್ನು ನೋಡಿದೆನು. ಮೊದಲನೆಯುದು ಮಹಾಭಾರತದಲ್ಲಿಯ ಸಂದರ್ಭವೊಂದನ್ನು ಕಥಾವಸ್ತುವನ್ನಾಗಿ ಇಟ್ಟುಕೊಂಡುದು ಎರಡನೆಯುದು ಕನ್ನಡ ಕವಿ ಆಂಡಯ್ಯನ 'ಕಬ್ಬಿಗರಕಾವ'ದ ರಮ್ಯ ಕಥೆಯನ್ನು ಒಳಗೊಂಡುದು. ಲೇಖಕರ ಮೊದಲಿನ ಕೃತಿಗಳಾದರೂ ಅವರ ಕನ್ನಡ ಸಾಹಿತ್ಯದ ಅಭ್ಯಾಸದ ರೀತಿಯನ್ನು ಸೂಚಿಸುವಂತಿವೆ ಈ ಪ್ರಾರಂಭ ಕೃತಿಗಳನ್ನು ಕನ್ನಡ ರಸಿಕರು ಸಹಾನುಭೂತಿಯಿಂದ ಪುರಸ್ಕರಿಸಿದಲ್ಲಿ ಈ ತರುಣ ಸಾಹಿತ್ಯಿಕರಿಂದ ನಮ್ಮ ಹೊಸ ಸಾಹಿತ್ಯ ಹೊಸಹೊಸ ಕೃತಿ ಕುಸುಮಗಳಿಂದ ಅಲಂಕಾರಗೊಳ್ಳಬಹುದು. ಹಾಗಾಗಲೆಂದು ನನ್ನ ಎದೆಯ ಬಯಕೆ.

ಜಯಂತಿ ಕಾರ್ಯಾಲಯ
ಧಾರವಾಡ — ಬೆಟಗೇರಿ ಕೃಷ್ಣಶರ್ಮ

ತಾ|| ೯—೬—೧೯೪೮

## ತರುಣ ಕವಿಯ ಗರಡಿಸಾಧನೆ

‘ ಭಾರತ ವೀರ ’ ‘ ಸಿವನ ಸೋಲು ’ ಗಳಲ್ಲಿ ಹಳೆಯದನ್ನು ಹೊಸಬಗೆಯಾಗಿ ಹೇಳುವ ಸಾಹಸ ವಿದೆ. ಪಂಪ ಆಂಡಯ್ಯರಿಂದ ಸ್ಫೂರ್ತಿಗೊಂಡ ಈ ಕವಿ ಅವರ ಚಂಪೂ ಕಾವ್ಯಗಳಲ್ಲಿಯ ನಾಟಕೀಯತೆಯನ್ನು ತಮ್ಮದೇ ಆದ ರೀತಿಯಲ್ಲಿ ಹೊಂದಿಸಿಕೊಂಡಿದ್ದಾರೆ. ತರುಣರು ಈ ರೀತಿ ಗರಡಿ ಸಾಧನೆ ಮಾಡಿದರೇನೇ ಮುಂದೆ ಸ್ವತಂತ್ರ ಕೃತಿ ರಚಿಸಲು ಸಹಾಯವಾಗುತ್ತದೆ.

ಧಾರವಾಡ
ತಾ|| ೧—೭—೪೮

ವಿ. ಜಿ. ಭಟ್ಟ, ಎಂ.ಎ.



---


ಮುದ್ರಕರು : ಫಕೀರಪ್ಪ ಎಲ್ಲಪ್ಪ ಮಿಂಡಗುದ್ದಿ, ರವೀಂದ್ರ ಮುದ್ರಣಾಲಯ ಉಳವಿ ಬಸವೇಶ್ವರ ಗುಡ್ಡ, ಧಾರವಾಡ. ಪ್ರಕಾಶಕರು : ಶ್ರೀ. ಬಿ. ವ್ಹಿ. ಘಾಟೇಕರ, ಸಮಾಜ ಪುಸ್ತಕಾಲಯ, ಧಾರವಾಡ.